# ಸಾರಸ್ವತ ಸೌರಭ



ತೃತೀಯ ಜಿ.ಎಸ್.ಬಿ. ಯುವವಾಹಿನಿ ಜಿಲ್ಲಾ ಸಮಾವೇಶ, ಯಲ್ಲಾಪುರ

## ಸ್ಮರಣ ಸಂಚಿಕೆ

# ಸಾರಸ್ವತ ಸೌರಭ



ತೃತೀಯ ಜಿ.ಎಸ್.ಬಿ. ಯುವವಾಹಿನಿ ಜಿಲ್ಲಾ ಸಮಾವೇಶ,
ಯಲ್ಲಾಪೂರ

## ಸ್ಮರಣ ಸಂಚಿಕೆ

# ಸಾರಸ್ವತ ಸೌರಭ

ಯಲ್ಲಾಪೂರ ಯುವವಾಹಿನಿ ಸಮಾವೇಶದಲ್ಲಿ ಬಿಡುಗಡೆಯಾಗಬೇಕಿದ್ದ "ಸಾರಸ್ವತ ಸೌರಭ" ಮಾಹಿತಿ ಪುಸ್ತಕ ಕಾರಣಾಂತರದಿಂದ ವಿಳಂಬವಾದರೂ, ಸಮಾವೇಶದಲ್ಲಿ ನೀಡಿದ ಆಶ್ವಾಸನೆಯಂತೆ ಪ್ರಕಟಿಸಿದ್ದೇವೆ. ಗೌರವಾನ್ವಿತ ಲೇಖಕರಿಂದ ಮತ್ತು ಪುಸ್ತಕಗಳಿಂದ ಸಂಗ್ರಹಿಸಿದ ಮಾಹಿತಿಗಳಿಂದ "ಸಾರಸ್ವತ ಸೌರಭ" ಸಿದ್ಧಪಡಿಸಲಾಗಿದೆ. ಕಣ್ತಪ್ಪಿನಿಂದಾಗಿರಬಹುದಾದ ತಪ್ಪು ತಿಳುವಳಿಕೆ ಮತ್ತು ಮಾಹಿತಿಗಳು ಕಂಡುಬಂದಲ್ಲಿ ಉದಾಸೀನ ಮಾಡಬೇಕಾಗಿ ವಿನಂತಿ. ತಮ್ಮ ಆತ್ಮೀಯ ಅನಿಸಿಕೆಗಳಿಗೆ ಹಾರ್ದಿಕ ಸ್ವಾಗತವಿದೆ.


ಸಂಪರ್ಕ ವಿಳಾಸ :

ಶ್ರೀ ರವಿ ಲಕ್ಷ್ಮಣ ಶ್ಯಾನಭಾಗ

ರವಿ ಎಂಡ್ ಕಂಪನಿ

ರಾಷ್ಟ್ರೀಯ ಹೆದ್ದಾರಿ ನಂ. 63, ಯಲ್ಲಾಪೂರ (ಉ.ಕ.)-581 359

ದೂರವಾಣಿ : 22164, 22264.


## ಸಹಾಯ ಸಂಸ್ಮರಣೆ


| | | |
|---|---|---|
| ಮುಖ್ಯ ಪ್ರಾಯೋಜಕರು | : | ಸಿಂಡಿಕೇಟ್ ಬ್ಯಾಂಕ್, ಮಣಿಪಾಲ. |
| | | ದಿ. ಶಿರಸಿ ಅರ್ಬನ್ ಕೋ-ಆಪ್ ಬ್ಯಾಂಕ್, ಶಿರಸಿ. |
| ಮಾರ್ಗದರ್ಶನ | : | ಶ್ರೀ ಗಜಾನನ ಬಿ. ಭಟ್ಟ, ಯಲ್ಲಾಪೂರ |
| | | ಶ್ರೀ ರಾಮು ಎಚ್. ಕಿಣಿ, ಶಿರಸಿ |
| | | ಶ್ರೀ ಕೂಡ್ಲ ಆನಂದು ಶ್ಯಾನಭಾಗ, ಶಿರಸಿ |
| | | ಶ್ರೀ ಉದಯ ವಿಷ್ಣು ಭಟ್ಟ, ಗುಂಡಬಾಳಾ |
| | | ಶ್ರೀ ದೇವಿದಾಸ ಎನ್. ಶ್ಯಾನಭಾಗ, ಯಲ್ಲಾಪೂರ |
| ಅನುವಾದಕರು | : | ಶ್ರೀ ಸದಾನಂದ ವಿ. ದೇಸಾಯಿ, ಯಲ್ಲಾಪೂರ |
| | | ಶ್ರೀ ಕೆ. ವಿ. ದೇವನಳ್ಳಿ, ಯಲ್ಲಾಪೂರ |
| ಕಂಪ್ಯೂಟರ ಗ್ರಾಫಿಕ್ಸ್ (ಸಂಕಲನ) | : | ಶ್ರೀ ಮಹೇಶ ಸುಂದರ ನಾಯ್ಕ, ಯಲ್ಲಾಪೂರ |
| | | ಎನ್.ಜಿ.ಟಿ. ಕಂಪ್ಯೂಟರ್ಸ್, ಯಲ್ಲಾಪೂರ |
| | | ನೀಲಮ್ ಗ್ರಾಫಿಕ್ಸ್, ಹುಬ್ಬಳ್ಳಿ. |
| ಸಹಾಯಕರು | : | ಕುಮಾರ ಅಭಿಷೇಕ ವಿನಾಯಕ ಪೈ, ಯಲ್ಲಾಪುರ |
| | | ಕುಮಾರಿ ಪ್ರತೀಕ್ಷಾ ರವಿ ಶ್ಯಾನಭಾಗ, ಯಲ್ಲಾಪುರ |
| ಆಧಾರ ಪುಸ್ತಕಗಳು | : | ಸಾರಸ್ವತ ಸಾರ, ಪಂಚಾಮೃತ |
| ಮುದ್ರಣ | : | ಮೆಟಲ್ ಓ ಪ್ರಿಂಟ್ಸ್, ಹುಬ್ಬಳ್ಳಿ. |

ಪ್ರಕಟಣೆ : ಶ್ರೀ ರಾಮಸೇವಾ ಸಂಘ, ಶ್ರೀ ಲಕ್ಷ್ಮೀ ನಾರಾಯಣ ವೆಂಕಟರಮಣಮಠ, ಯಲ್ಲಾಪುರ.



ಯಲ್ಲಾಪೂರ ವಾಸ್ತವ್ಯದಲ್ಲಿ ತಮ್ಮ ಆರಾಧ್ಯದೈವ ಶ್ರೀ ವೀರವಿಠ್ಠಲದೇವರಿಗೆ ಪೂಜೆ ಸಲ್ಲಿಸುತ್ತಿರುವ
ಶ್ರೀ ಪರ್ತಗಾಳಿ ಮಠಾಧೀಶ ಶ್ರೀಮದ್ ವಿದ್ಯಾಧಿರಾಜ ತೀರ್ಥ ಸ್ವಾಮಿಮಹಾರಾಜರು



ಶ್ರೀ ದಯಾನಂದ ಟಿ. ಪೈ

# ಪ್ರಾಮಾಣಿಕ ಪ್ರಯತ್ನ ಮತ್ತು ದೃಢವಾದ ನಿರ್ಧಾರಗಳು ಯಾವಾಗಲೂ ಗುರಿಯನ್ನು ಮುಟ್ಟಲು ಸಹಾಯ ಮಾಡುತ್ತವೆ

ಸಿಂಡಿಕೇಟ ಬ್ಯಾಂಕಿನ ಅಧ್ಯಕ್ಷರು ಮತ್ತು ಆಡಳಿತ ನಿರ್ದೇಶಕರಾದ ಶ್ರೀ ದಯಾನಂದ ಟಿ. ಪೈ ಇವರು ಇದಕ್ಕೆ ಜ್ವಲಂತ ನಿದರ್ಶನ. ಇವರು ದಿನಾಂಕ 1-4-1969ರಂದು ಸಣ್ಣ ಕೈಗಾರಿಕೆಗಳ ಲೊಕಲ್ ಕಮಿಟಿಯ ಕಾರ್ಯದರ್ಶಿಯಾಗಿ ದೆಹಲಿಯಲ್ಲಿ ಸಿಂಡಿಕೇಟ ಬ್ಯಾಂಕನ್ನು ಸೇರಿದರು. ಇಂದು ಅವರು ಸಿಂಡಿಕೇಟ ಬ್ಯಾಂಕಿನ ಅಧ್ಯಕ್ಷ ಮತ್ತು ಆಡಳಿತ ನಿರ್ದೇಶಕರ ಸ್ಥಾನವನ್ನು ಅಲಂಕರಿಸಿದ್ದಾರೆ. ಕಾಲಾಂತರದಲ್ಲಿ ಅವರ ಪ್ರಯತ್ನ ಮತ್ತು ಪ್ರಾಮಾಣಿಕತೆಯು ಅವರಿಗೆ ಅವರ ವೈಯಕ್ತಿಕ ಹಾಗೂ ವೃತ್ತಿ ಜೀವನದಲ್ಲಿ ಸಮೃದ್ಧಿ ಮತ್ತು ಮೇಲ್ದರ್ಜೆಯನ್ನು ದೊರಕಿಸಿಕೊಟ್ಟಿದೆ. ಸಮಾಜದ ಯುವಕರಿಗೆ ಜೀವನದಲ್ಲಿ ಸಕಲವನ್ನೂ ಪಡೆಯಲು ಅವರೊಂದು ಮಾದರಿ.

ಹೊನ್ನಾವರ ತಾಲೂಕಿನ ಹಳದಿಪುರದಲ್ಲಿ ತಾ. 17-01-1942ರಲ್ಲಿ ಜನಿಸಿದ ಶ್ರೀ ದಯಾನಂದ ಪೈಯವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಕುಮಟಾ ಮತ್ತು ಹೊನ್ನಾವರಗಳಲ್ಲಿ ಪೂರೈಸಿ ಮುಂಬೈ ವಿಶ್ವವಿದ್ಯಾನಿಲಯದಿಂದ ವಾಣಿಜ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು.

ದೆಹಲಿಯಲ್ಲಿ ಸಣ್ಣ ಕೈಗಾರಿಕೆಗಳ ಲೊಕಲ್ ಲೋನ್ಸ್ ಕಮೀಟಿಯ ಕಾರ್ಯದರ್ಶಿಯಾಗಿ ಸೇರಿದ ಇವರು ತದ ನಂತರದಲ್ಲಿ ದೆಹಲಿ, ಚಂದಿಘಡ ಮತ್ತು ಅಹಮದಾಬಾದ ರಿಜನಲ್ ಮೆನೇಜರ ಆಗಿ ಸೇವೆ ಸಲ್ಲಿಸಿ ಕಲ್ಕತ್ತಾದಲ್ಲಿ ಜನರಲ್ ಮೆನೇಜರ್ ಆಗಿ ಬಡ್ತಿ ಪಡೆದರು. ಅವರು ಯೋಜನೆ ಮತ್ತು ಅಭಿವೃದ್ಧಿ ಸಾಲ ಮತ್ತು ಅಂತರಾಷ್ಟ್ರೀಯ ಬ್ಯಾಂಕಿಂಗ್ ನಿಧಿ ಮತ್ತು ಹೂಡಿಕೆ ನಿರ್ವಹಣೆ, ಮರ್ಚೆಂಟ್ ಬ್ಯಾಂಕಿಂಗ್, ಲೆಕ್ಕಪತ್ರ ಮತ್ತು ಸೇವೆ ಮುಂತಾದ ವಿಭಾಗಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

ಅಗಸ್ಟ 1996 ರಿಂದ ಮೇ 2000ರ ವರೆಗೆ ಇವರು ಯುನಿಯನ್ ಬ್ಯಾಂಕಿನ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ವಿದೇಶಿ ತಾಂತ್ರಿಕ ಒಪ್ಪಂದ, ಸಮಗ್ರ ಆಡಳಿತ, ಸಾಲದ ನೀತಿಯ ಉನ್ನತ ನಿರ್ವಹಣೆ, ಅನಿಯಂತ್ರಣ ಮತ್ತು ತಳಹಂತದ ಬ್ಯಾಂಕಿಂಗ್ (ಬ್ಯಾಂಕಿಂಗ್ ತರಬೇತಿ ಕಾಲೇಜನಿಂದ) ಅಖಿಲ ಭಾರತ ಆಡಳಿತ ಸಂಘ, ಭಾರತೀಯ ಆಡಳಿತಾತ್ಮಕ ನೌಕರರ ಕಾಲೇಜ, ವ್ಯವಸಾಯ ಬ್ಯಾಂಕಿಂಗ್ ಕಾಲೇಜ ಮತ್ತು ಅಖಿಲ ಭಾರತ ಮೆನೇಜಮೆಂಟ್ ವಿಧ ವಿಧವಾದ ತರಬೇತಿ ಶಿಬಿರ ಮತ್ತು ಕಾರ್ಯಕ್ರಮಗಳನ್ನು ನಡೆಸಿದ್ದಾರೆ. ಲಂಡನ್, ಸಿಂಗಾಪುರ, ಇಂಡೋನೇಶಿಯಾ, ದೋಹಾ, ಮಸ್ಕತ್ ಮತ್ತು ಕುವೈತ ಮುಂತಾದ ದೇಶಗಳಿಗೆ ಕಾರ್ಯಾತ್ಮಕ ಭೇಟಿ ನೀಡಿದ್ದಾರೆ. International Banking Delgationನ ಸದಸ್ಯರಾಗಿ ಇರಾಕಗೆ ಭೇಟಿ ನೀಡಿದ್ದಾರೆ. ಇಂದು ಅವರು Indian Banks Associationನ ಸದಸ್ಯರಾಗಿ ಭಾರತೀಯ ಯುನಿಟ್ ಟ್ರಸ್ಟನ ಟ್ರಸ್ಟೀ ಆಗಿ ಮತ್ತು T. A. Pai Memorial Institute, ಮಣಿಪಾಲ ಇದರ ಗೌರವ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**ಉತ್ತರ ಕನ್ನಡ ಜಿ.ಎಸ್.ಬಿ. ಯುವವಾಹಿನಿ ಇವರಿಗೆ ಹಾರ್ದಿಕವಾಗಿ ಅಭಿನಂದಿಸುತ್ತದೆ.**



ಸಮಾಜ ಸೇವೆ, ಧಾರ್ಮಿಕ ಸೇವೆ, ಶಿಕ್ಷಣ ಸೇವೆ, ಕೃಷಿರಂಗದ ಸೇವೆ, ಸಹಕಾರ ರಂಗದ ಸೇವೆಯ ಮಾತು ಬಂದಾಗ ಶಿರಸಿಯ ಡಾ|| ವ್ಹಿ. ಎಸ್. ಸೋಂದೆಯವರ ಹೆಸರು ಬರುತ್ತದೆ. ಅವರ ಕಾರ್ಯಕ್ಷೇತ್ರ, ಉತ್ತರ ಕನ್ನಡ ಜಿಲ್ಲೆಯಾದರೂ ಅವರು ಕನ್ನಡ ನಾಡಿಗೇ ಪರಿಚಿತರು.

**ಡಾ|| ವ್ಹಿ. ಎಸ್. ಸೋಂದೆ**

1930 ಡಿಸೆಂಬರ್ 28ರಂದು ಶಿರಸಿ ನಗರದ ಒಂದು ಪ್ರತಿಷ್ಠಿತ ಕೃಷಿ ಕುಟುಂಬದಲ್ಲಿ ಜನಿಸಿದ ಇವರು ಶಿರಸಿ, ಬೆಳಗಾಂವ್, ಧಾರವಾಡಗಳಲ್ಲಿ ಓದಿ ಕೃಷಿ ವಿಜ್ಞಾನ ಶಾಸ್ತ್ರದಲ್ಲಿ ಪದವೀಧರರಾಗಿ ಹೊರಬಂದರು. ತಾನು ಕಲಿತ ವಿದ್ಯೆಯ ಪ್ರಯೋಜನ ಪಡೆಯಲು ತಮ್ಮ ಹೊಲ ತೋಟಗಳಲ್ಲಿ ವಿವಿಧ ಪ್ರಯೋಗ ನಡೆಯಿಸಿ, ಕೃಷಿ ವಿಶ್ವವಿದ್ಯಾಲಯದ ಗಮನವನ್ನು ಸೆಳೆದು ಕೆಲವು ಕಾಲ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ರೀಜಂಟರಾಗಿಯೂ ಕೆಲಸ ನಿರ್ವಹಿಸಿದರು. ತಮ್ಮ ಸುತ್ತಮುತ್ತಲಿನ ರೈತರಿಗೆ, ತೋಟಿಗರಿಗೆ, ಸೂಕ್ತ ಮಾರ್ಗದರ್ಶನ ಮಾಡಿ ಅಧುನಿಕ ಸಲಕರಣೆ, ಗೊಬ್ಬರ, ತಂತ್ರಜ್ಞಾನದ ಪ್ರಯೋಜನ ಪಡೆಯುವಂತೆ ಮಾಡಿದರು.

ಶಿಕ್ಷಣ ಕ್ಷೇತ್ರದಲ್ಲಿ ಇವರು ಇಂದು ಆಜಾನುಬಾಹುಗಳಾಗಿ ಬೆಳೆದಿದ್ದಾರೆ. 1961ರಲ್ಲಿ ಮಾಡರ್ನ್ ಎಜ್ಯುಕೇಶನ್ ಸೊಸ್ಯಾಟಿಯು ಸ್ಥಾಪಿತವಾದಂದಿನಿಂದ ಇಂದಿನವರೆಗೆ ಒಂದಿಲ್ಲೊಂದು ಹುದ್ದೆ ಭೂಷಿಸುತ್ತ ಆರ್ಟ್ಸ ಆಂಡ್ ಸೈನ್ಸ್ ಕಾಲೇಜ, ಕಾನೂನು ಕಾಲೇಜ, ಕಾಮರ್ಸ ಕಾಲೇಜ, ಪಾಲಿಟೆಕ್ನಿಕ್ ಕಾಲೇಜು, ವೃತ್ತಿಪರ ತರಬೇತಿ ಕೋರ್ಸುಗಳು, ಮಾಧ್ಯಮಿಕ ಶಾಲೆ, ಅನುದಾನರಹಿತ ಮಾದರಿ ಕನ್ನಡ ಶಾಲೆ ಮೊದಲಾದವುಗಳ ಮೂಲಕ ವಿದ್ಯಾರ್ಥಿಗಳಿಗೆ ನೆರವಾಗುತ್ತ ಬಂದಿದ್ದಾರೆ. ಈಗ ಕಳೆದ 18-20 ವರ್ಷಗಳಿಂದ ಇವರು ಮಾಡರ್ನ್ ಎಜ್ಯುಕೇಶನ್ ಸೊಸ್ಯಾಟಿಯ ಅಧ್ಯಕ್ಷರಾಗಿ ಚುಕ್ಕಾಣಿಯನ್ನು ಹಿಡಿದಿದ್ದಾರೆ.

1964 ರಿಂದ ದಿ|| ಎಸ್. ಎನ್. ಕೇಶವೈನರ ಗರಡಿಯಲ್ಲಿ ಸಹಕಾರಿ ರಂಗದ ಪಟ್ಟುಗಳನ್ನು ಕಲಿತ ಇವರು ಶಿರಸಿ ಅರ್ಬನ್ ಬ್ಯಾಂಕಿನ ಆಡಳಿತ ನಿರ್ದೇಶಕರಾಗಿ ಸೇರಿಕೊಂಡು 1987ರಿಂದ ಅಧ್ಯಕ್ಷರಾಗಿ ಪುನಃ ಪುನಃ ಆಯ್ಕೆಯಾಗಲು ಕಾರಣ ಇವರು ಬ್ಯಾಂಕ್ ಬೆಳೆಸಿದ ರೀತಿ. ಈಗ ಈ ಬ್ಯಾಂಕು ಹದಿನಾಲ್ಕು ಶಾಖೆಗಳನ್ನು ಹೊಂದಿ ಕೋಟಿಗಟ್ಟಲೆ ಲಾಭ ಪಡೆಯುತ್ತಿದೆ.

1982ರಲ್ಲಿ ಶಿರಸಿಯಲ್ಲಿ ಜರುಗಿದ ಅಖಿಲ ಭಾರತ 55ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾದ ಇವರು 1995ರಲ್ಲಿ ಜರುಗಿದ ಅಖಿಲ ಭಾರತ ಕೊಂಕಣಿ 20ನೆಯ ಸಮ್ಮೇಳನದ ಸ್ವಾಗತಾಧ್ಯಕ್ಷರೂ ಆಗಿದ್ದರು. ಇದಲ್ಲದೆ ಜಿಲ್ಲೆಯಲ್ಲಿ ನಡೆದ ಬೇರೆ ಬೇರೆ ಸಮ್ಮೇಳನಗಳನ್ನು ಇವರು ಪ್ರೋತ್ಸಾಹಿಸಿದ್ದಾರೆ.

ಇವರು ರೋಟರಿ ಕ್ಲಬ್ ಅಧ್ಯಕ್ಷರಾಗಿ, ಶಿರಸಿ ಜನರಲ್ ಆಸ್ಪತ್ರೆಯ ಸಲಹೆಗಾರರಾಗಿ, ಜೀವವಿಮಾ ನಿಗಮದ ಧಾರವಾಡ ವಿಭಾಗದ ಪತ್ರಧಾರಕರ ಬಳಗದ ಸದಸ್ಯರಾಗಿ, ಖಾಸಗಿ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷರಾಗಿ, ಉತ್ತರ ಕನ್ನಡ ಜಿಲ್ಲೆಯ ಹಾರ್ಟಿಕಲ್ಚರ್ ಸೊಸ್ಯಾಟಿಯ ಗೌರವ ಕಾರ್ಯದರ್ಶಿಯಾಗಿ, ಭಾರತೀಯ ಅಡಿಕೆ ಮತ್ತು ಕೊಕೋ ಕೌನ್ಸಿಲಿನ ಪ್ರತಿನಿಧಿಯಾಗಿ, ಧಾರವಾಡ ಆಕಾಶವಾಣಿಯ ಸಲಹಾ ಮಂಡಳದ ಸದಸ್ಯರಾಗಿ ಇತರ ಅನೇಕ ಧಾರ್ಮಿಕ, ಸಾಮಾಜಿಕ ಸಂಸ್ಥೆಗಳ ಸದಸ್ಯರಾಗಿ ದುಡಿಯುತ್ತ ಬಂದಿದ್ದಾರೆ.

ಇವರ ಸಮಾಜ ಸೇವೆಯನ್ನು ಗಮನಿಸಿ ಶ್ರೀ ಗೋಕರ್ಣ ಪರ್ತಗಾಳಿ ಮಠದ ಪ್ರತಿಷ್ಠಿತ ವಿದ್ಯಾಧಿರಾಜ ಪ್ರಶಸ್ತಿ, ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿಗಳು ಇವರಿಗೆ ಲಭಿಸಿವೆ.

ಸಮಾಜದ ಸರ್ವ ವರ್ಗದ ಜನರ ಆದರಣೀಯ ವ್ಯಕ್ತಿಗಳಾದ
ಶ್ರೀ ಸೋಂದೆಯವರಿಗೆ ಜಿಲ್ಲಾ ಜಿ.ಎಸ್.ಬಿ. ಯುವವಾಹಿನಿ ಶುಭ ಹಾರೈಸುತ್ತದೆ.

# ಸಮರ್ಪಣ



ಜಿ. ಎಸ್. ಬಿ. ಯುವವಾಹಿನಿಯ ತೃತೀಯ ಜಿಲ್ಲಾ ಸಮಾವೇಶವು ಯಲ್ಲಾಪುರದಲ್ಲಿ ನಡೆಯುವುದು ನಿರ್ಧರಿತವಾದಾಗ ಈ ಸಮಾವೇಶವನ್ನು ಹಿಂದೆ ನಡೆದ ಎರಡು ಸಮಾವೇಶಗಳಿಗಿಂತ ಭಿನ್ನವಾಗಿ ಮತ್ತು ಅರ್ಥಪೂರ್ಣವಾಗಿ ನಡೆಸಬೇಕೆಂದು ತೀರ್ಮಾನಿಸಲಾಯಿತು.

ಅದಕ್ಕನುಗುಣವಾಗಿ ಸಮಾವೇಶಕ್ಕೆ ಬರುವ ಜಿಲ್ಲಾ ಪ್ರತಿನಿಧಿಗಳಿಗೆ ನಮ್ಮ ಸಮಾಜದ ಬಗ್ಗೆ ಸರಿಯಾದ ಮಾಹಿತಿ ನೀಡುವ ಒಂದು ಉಪಯುಕ್ತ ಪುಸ್ತಕವನ್ನು ನೆನಪಿನ ಕಾಣಿಕೆಯಾಗಿ ನೀಡುವುದೆಂದು ಯೋಜಿಸಲಾಯಿತು.

ಭವ್ಯ ಭಾರತ ದೇಶದ ಪ್ರತಿಯೊಂದು ರಂಗದಲ್ಲಿಯೂ ಸಾರವಂತ ಸಾರಸ್ವತ ಸಮಾಜದ ಹಿರಿಯರು ತಮ್ಮ ಸ್ವಂತ ಪರಿಶ್ರಮದಿಂದ - ಬುದ್ಧಿಮತ್ತೆಯಿಂದ ಅಪ್ರತಿಮ ದೇಶಭಕ್ತಿಯಿಂದ ಮೆರೆದಿದ್ದಾರೆ. ಸಾರಸ್ವತರೆಂದರೆ ಸುಸಂಸ್ಕೃತರು ಎಂಬುದು ಜನಜನಿತವಾಗಿದೆ. ನಮ್ಮ ಹಿರಿಯರು ಅನೇಕ ತಲೆ ಮಾರುಗಳಿಂದ ಸಮೃದ್ಧ ವೈವಿಧ್ಯಮಯ ಆಚಾರ-ವಿಚಾರಗಳನ್ನು ಕಾಪಾಡಿಕೊಂಡು ಬಂದು ಇಂದು ನಮ್ಮ ಯುವ ಜನಾಂಗಕ್ಕೆ ಅದನ್ನು ಧಾರೆ ಎರೆದಿದ್ದಾರೆ. ಅದನ್ನು ನಾವು ಗರ್ವದಿಂದ ಸ್ಮರಿಸಿ ನಮ್ಮತನವನ್ನು ಮುಂದುವರೆಸಿಕೊಂಡು ಹೋಗಬೇಕಾಗಿದೆ. ಇದರಲ್ಲಿ ಯುವಕರ ಪಾತ್ರ ಮಹತ್ವದ್ದಾಗಿದೆ.

ನಮ್ಮ ಸಮಾಜದ ಪ್ರಸಿದ್ಧ ಲೇಖಕರು ಮತ್ತು ಅಂಕಣಕಾರರಿಂದ ಕೆಲವು ಉಪಯುಕ್ತ ಮಾಹಿತಿಗಳನ್ನು ಸಂಗ್ರಹಿಸಿ ಅದರ ಕಂಪನ್ನು ಬೀರುವ **ಸಾರಸ್ವತ ಸೌರಭ** ಪುಸ್ತಕವನ್ನು ತಮಗೆ ನೀಡುತ್ತಿದ್ದೇವೆ.

ಸಮಾವೇಶದ ನೆನಪಿನ ಕಾಣಿಕೆಯಾಗಿ ನೀಡಿದ ಈ ಮಾಹಿತಿ ಪುಸ್ತಕಕ್ಕೆ ಪ್ರಪ್ರಥಮವಾಗಿ ಆಶೀರ್ವದಿಸಿ ಉಪಯುಕ್ತ ಮಾಹಿತಿಗಳನ್ನು ನೀಡಿ ಶುಭ ಹಾರೈಸಿದ ನಮ್ಮ ಪೂಜ್ಯ ಗುರುಗಳಾದ **ಶ್ರೀಮದ್ ವಿದ್ಯಾಧೀರಾಜ ತೀರ್ಥ ಸ್ವಾಮಿ ಮಹಾರಾಜರ** ದಿವ್ಯ ಚರಣ ಕಮಲಗಳಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಈ ಪುಸ್ತಕವನ್ನು ಪ್ರಕಟಿಸಲು ಸಹಕರಿಸಿದ ಸಿಂಡಿಕೇಟ ಬ್ಯಾಂಕ ಮಣಿಪಾಲ ಮತ್ತು ಅದರ ಗೌರವಾನ್ವಿತ ಅಧ್ಯಕ್ಷರಾದ ಮಾನ್ಯ ಶ್ರೀ ದಯಾನಂದ ಟಿ. ಪೈ ಮತ್ತು ಶಿರಸಿ ಅರ್ಬನ್ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ವಿ. ಎಸ್. ಸೋಂದೆಯವರಿಗೆ ಆಭಾರಿಯಾಗಿದ್ದೇವೆ. ಸಮಾಜದ ಉಪಯುಕ್ತ ಮಾಹಿತಿಗಳನ್ನು ನೀಡಿ ಸಹಕರಿಸಿದ ಗೌರವಾನ್ವಿತ ಬರಹಗಾರರಿಗೆ ಚಿರಋಣಿಯಾಗಿದ್ದೇವೆ. ವಿಶೇಷವಾಗಿ ಪ್ರಮುಖ ಸಾಹಿತ್ಯಗಳನ್ನು ಒದಗಿಸಿ ಈ ಪುಸ್ತಕಕ್ಕೆ ಪ್ರಾಯೋಜಕರನ್ನು ದೊರಕಿಸಿಕೊಟ್ಟ ಶ್ರೀ ಕೂಡ್ಲು ಆನಂದು ಶ್ಯಾನಭಾಗ ಶಿರಸಿ ಮತ್ತು ಆಕರ್ಷಕವಾಗಿ ಮುದ್ರಿಸಿಕೊಟ್ಟ ಮೆಟಲ್-ಓ-ಪ್ರಿಂಟ್ಸ್ ಹುಬ್ಬಳ್ಳಿ ಮತ್ತು ಉಪಯುಕ್ತ ಮಾರ್ಗದರ್ಶನ ನೀಡಿದ ಸರ್ವರಿಗೂ ಧನ್ಯವಾದಗಳು.

ರವಿ ಲಕ್ಷ್ಮಣ ಶಾನಭಾಗ
ಸಂಚಾಲಕರು
ತೃತೀಯ ಜಿ. ಎಸ್. ಬಿ. ಯುವವಾಹಿನಿ, ಜಿಲ್ಲಾ ಸಮಾವೇಶ.

# ತೃತೀಯ ಜಿ. ಎಸ್. ಬಿ. ಯುವವಾಹಿನಿ ಜಿಲ್ಲಾ ಸಮಾವೇಶ

## ಜಿ. ಎಸ್. ಬಿ. ಯುವವಾಹಿನಿ, ಯಲ್ಲಾಪುರ

### ಸ್ವಾಗತ ಸಮಿತಿ

ಗೌರವಾಧ್ಯಕ್ಷರು : ಶ್ರೀ ಗಜಾನನ ಬಾಬುರಾವ ಭಟ್ಟ

ಅಧ್ಯಕ್ಷರು : ಶ್ರೀ ಶಿರೀಷ ಸುಬ್ರಾಯ ಪ್ರಭು

ಕಾರ್ಯಾಧ್ಯಕ್ಷರು : ಶ್ರೀ ಮಾರುತಿ ಸುಧಾಕರ ನಾಯಕ

ಉಪಾಧ್ಯಕ್ಷರು : ಶ್ರೀ ನಂದನ ವೆಂಕಟರಾವ ಬಾಳಗಿ

ಕಾರ್ಯದರ್ಶಿ : ಶ್ರೀ ಸತೀಶ ಹರಿಹರ ಬಳಕೂರ

ಸಹಕಾರ್ಯದರ್ಶಿಗಳು : ಶ್ರೀ ಗಜಾನನ ಕೇಶವ ನಾಯಕ
ಶ್ರೀ ಬಾಲಕೃಷ್ಣ ಪಾಂಡುರಂಗ ನಾಯಕ

ಕೋಶಾಧ್ಯಕ್ಷರು : ಶ್ರೀ ಉಮೇಶ ವಾಮನ ಶ್ಯಾನಭಾಗ

ಕಾರ್ಯದರ್ಶಿಗಳು (ಹಣಕಾಸು) : ಶ್ರೀ ರಾಜೇಶ ಸುರೇಶ ಭಟ್ಟ
ಶ್ರೀ ವೆಂಕಟೇಶ ರಾಧಾಕೃಷ್ಣ ಶ್ಯಾನಭಾಗ

ಸಂಚಾಲಕರು : ಶ್ರೀ ರವಿ ಲಕ್ಷ್ಮಣ ಶ್ಯಾನಭಾಗ

ಸಲಹೆಗಾರರು : ಶ್ರೀ ರಾಘವ ವಿಷ್ಣು ಬಾಳೇರಿ
ಹೊನ್ನಾವರ
ಶ್ರೀ ಕೂಡ್ಲ ಆನಂದು ಶ್ಯಾನಭಾಗ
ಶಿರಸಿ
ಶ್ರೀ ದೇವಿದಾಸ ನಾಗೇಶ ಶ್ಯಾನಭಾಗ
ಯಲ್ಲಾಪುರ

### ಪ್ರಚಾರ ಮತ್ತು ಸಂಚಾರ

ಕಾರ್ಯದರ್ಶಿ : ಶ್ರೀ ದಯಾನಂದ ಎಸ್. ಕಾರಂತ

ಸಹಕಾರ್ಯದರ್ಶಿಗಳು : ಶ್ರೀ ರಾಜಾ ಪಿ. ಪ್ರಭು
ಶ್ರೀ ಸಚೀನ ಎಸ್. ಕೇಕ್ರಿ
ಶ್ರೀ ಸುಧಾಕರ ಎಸ್. ಪ್ರಭು

### ಊಟ ಮತ್ತು ಉಪಹಾರ

ಕಾರ್ಯದರ್ಶಿ : ಶ್ರೀ ಉಲ್ಲಾಸ ಎಸ್. ಮಹಾಲೆ

ಸಹಕಾರ್ಯದರ್ಶಿಗಳು : ಶ್ರೀ ಗೋಪಾಲಕೃಷ್ಣ ಎನ್. ಪೈ
ಶ್ರೀ ನಾಗೇಂದ್ರ ವಿ. ಪ್ರಭು

### ಅತಿಥಿಗಳ ಮೇಲುಸ್ತುವಾರಿ

ಕಾರ್ಯದರ್ಶಿ : ಶ್ರೀ ರವೀಂದ್ರ ವಿ. ಪ್ರಭು

ಸಹಕಾರ್ಯದರ್ಶಿಗಳು : ಶ್ರೀ ಸದಾನಂದ ವಿ. ದೇಸಾಯಿ
ಶ್ರೀ ಪದ್ಮನಾಭ ಎನ್. ಶ್ಯಾನಭಾಗ
ಶ್ರೀ ರಾಜೇಂದ್ರ ಬಿ. ಭಟ್

### ವೇದಿಕೆ, ಆಸನ ಮತ್ತು ಕಾರ್ಯಕ್ರಮಗಳ ನಿರ್ವಹಣೆ

ಕಾರ್ಯದರ್ಶಿ : ಶ್ರೀ ಮಾಧವ ಜಿ. ನಾಯ್ಕ

ಸಹಕಾರ್ಯದರ್ಶಿಗಳು : ಶ್ರೀ ಗಿರೀಶ ಡಿ. ಪೈ
ಶ್ರೀ ಮಾರುತಿ ಎಸ್. ಪ್ರಭು

### ಪ್ರತಿನಿಧಿ ಸಂಪರ್ಕ ಮತ್ತು ಲೆಕ್ಕಪತ್ರಗಳ ನಿರ್ವಹಣೆ

ಕಾರ್ಯದರ್ಶಿ : ಶ್ರೀ ಕೃಷ್ಣಾನಂದ ವಿ. ದೇವನಳ್ಳಿ

ಸಹಕಾರ್ಯದರ್ಶಿಗಳು : ಶ್ರೀ ಸುರೇಶ ಎಲ್. ಶ್ಯಾನಭಾಗ
ಶ್ರೀ ರಾಮಚಂದ್ರ ಡಿ. ಹೆಗಡೆ
ಶ್ರೀ ಸುರೇಂದ್ರ ಆರ್. ಪೈ

# ಮೇಲ್ಸೈ ಯಲ್ಲಾಪುರ



ಮನಸೆಳೆಯುವ ಸಹ್ಯಾದ್ರಿಯ ಗಿರಿ-ಶಿಖರಗಳು, ಆಳವಾದ ಪ್ರಪಾತಗಳು, ಸದಾ ಹಸಿರಾಗಿರುವ ವನಸಿರಿ, ಪ್ರಕೃತಿ ನಿರ್ಮಿತ ಸಣ್ಣ ದೊಡ್ಡ ಜಲಪಾತಗಳು, ಸದಾ ಚೇತೋಹಾರಿ ಅಡಿಕೆ, ತೆಂಗುಗಳ ಮಡಿಲು ಒಂದೆಡೆಯಾದರೆ ತುಸು ದೂರದಲ್ಲಿ ನೆರೆ - ತೊರೆಗಳ ಭೋರ್ಗರೆವ ಕರಾವಳಿಯ ರಮಣೀಯತೆ ಬಯಲು ನಾಡಿನ ಬೆಡಗು. ಇದೇ ಉತ್ತರ ಕನ್ನಡದ ಹೃದಯ ಭಾಗದಂತಿರುವ ಯಲ್ಲಾಪುರದ ಭೌಗೋಳಿಕ ಪರಿಚಯ.

ಜಿಲ್ಲೆಯ ಪ್ರಮುಖ ಪಟ್ಟಣಗಳಾದ ದಾಂಡೇಲಿ, ಹಳಿಯಾಳ ಯಲ್ಲಾಪುರದ ಉತ್ತರಕ್ಕೆ ಇದ್ದರೆ ಪಶ್ಚಿಮದಲ್ಲಿ ಕಾರವಾರ, ಅಂಕೋಲಾಗಳು ಇವೆ. ದಕ್ಷಿಣಕ್ಕೆ ಕುಮಟಾ, ಹೊನ್ನಾವರ, ಭಟ್ಕಳ, ಶಿರಸಿ, ಸಿದ್ದಾಪುರ ಹಾಗೂ ಪೂರ್ವಕ್ಕೆ ಮುಂಡಗೋಡ ಇದೆ.

ಯಲ್ಲಾಪುರ ಪಟ್ಟಣ ಆಧುನಿಕತೆಯ ಬೆಡಗು ಮತ್ತು ಗ್ರಾಮಾಂತರದ ಸೊಗಡನ್ನು ಮೇಳೈಸಿಕೊಂಡ ಹಲವಾರು ಕೆರೆಗಳಿಂದ ಆವೃತವಾದ ದೊಡ್ಡ ಗ್ರಾಮವಾಗಿದೆ. ಇದು ಉತ್ತರ ಕನ್ನಡದ ಮಧ್ಯಭಾಗದಲ್ಲಿದ್ದು ರಾಷ್ಟ್ರೀಯ ಹೆದ್ದಾರಿ ನಂ. 63 ನಗರವನ್ನು ಸೀಳಿಕೊಂಡು ಹೋಗಿದೆ. ಶಿರಸಿ, ಮುಂಡಗೋಡ, ಕಾರವಾರ, ಬೆಳಗಾವಿ, ಧಾರವಾಡ, ಹುಬ್ಬಳ್ಳಿಗಳಿಗೆ ಹೋಗಲು ಇಲ್ಲಿಂದ ಪ್ರತ್ಯೇಕ ಮಾರ್ಗಗಳಿರುವುದು ಒಂದು ವಿಶೇಷ.

ಒಂದು ತಾಲೂಕಾ ಪ್ರದೇಶದಲ್ಲಿ ಇರಬಹುದಾದ ಎಲ್ಲ ಸೌಕರ್ಯಗಳು ಇಲ್ಲಿ ಲಭ್ಯ. ಸರಕಾರಿ ಆಸ್ಪತ್ರೆ, ತಾಲೂಕಾ ಕಛೇರಿ, ನ್ಯಾಯಾಲಯ ಕಟ್ಟಡಗಳು ವಿಸ್ತಾರದಲ್ಲಿ ದೊಡ್ಡದಾಗಿವೆ. ಹಲವಾರು ಸರಕಾರಿ ಮತ್ತು ಖಾಸಗೀ ಶಿಕ್ಷಣ ಸಂಸ್ಥೆಗಳು ಇಲ್ಲಿ ಯಶಸ್ವಿಯಾಗಿ ನೆಲೆ ನಿಂತಿವೆ. ಇಲ್ಲಿಯ ಗ್ರಾಮದೇವಿ ಜಾತ್ರೆ, ಕರ್ನಾಟಕದ ಪ್ರಸಿದ್ಧ ಜಾತ್ರೆಗಳಲ್ಲೊಂದಾಗಿದ್ದು ಮೂರು ವರ್ಷಗಳಿಗೊಮ್ಮೆ ಜರಗುತ್ತದೆ. ಗ್ರಾಮದೇವಿ ದೇವಸ್ಥಾನವಲ್ಲದೇ ಲಕ್ಷ್ಮೀನಾರಾಯಣ ವೆಂಕಟ್ರಮಣ ದೇವಸ್ಥಾನ, ಚರ್ಚ, ಮಸೀದಿಗಳು ಸಹ ನೋಡಲು ಭವ್ಯವಾಗಿವೆ. ಹಲವಾರು ಪ್ರೇಕ್ಷಣೀಯ ಸ್ಥಳಗಳನ್ನು ಹೊಂದಿರುವ ಯಲ್ಲಾಪುರ ಪ್ರವಾಸೋದ್ಯಮವನ್ನು ಬೆಳೆಸಲು ಹೇಳಿ ಮಾಡಿಸಿದಂತಿದೆ. ಹತ್ತು ಸಾವಿರಕ್ಕೂ ಹೆಚ್ಚು ಪ್ರಭೇದದ ಸಸ್ಯರಾಶಿಯನ್ನು ಹೊಂದಿರುವ ಯಲ್ಲಾಪುರದ ಸುತ್ತ-ಮುತ್ತಲಿನ ಸದಾ ಹಸಿರು ಕಾಡು ಏಷ್ಯಾ ಖಂಡದಲ್ಲಿಯೇ ಅತ್ಯಂತ ಮಹತ್ವದ ಸ್ಥಾನ ಹೊಂದಿದೆ. ಹಲವಾರು ಜಲ ವಿದ್ಯುತ್ ಯೋಜನೆಗಳಿಂದ ಸಾವಿರಾರು ಹೆಕ್ಟೇರು ಕಾಡು ನಾಶವಾದರೂ ಇನ್ನೂ ಮಹತ್ವದ ಪರಿಸರವನ್ನು ಹೊಂದಿದೆ. ಯಲ್ಲಾಪುರದ ಸುತ್ತ ಮುತ್ತ ಲಾಲಗುಳಿ, ಮಾಗೋಡ, ಸಾತೊಡ್ಡಿ ಮತ್ತು ಶಿರ್ಲೆಗಳೆಂಬ ಮನಸ್ಸಿಗೆ ಮುದ ನೀಡುವ ಜಲಪಾತಗಳಿವೆ. 8 ಕಿ.ಮೀ. ದೂರದಲ್ಲಿ 60 ಎಕರೆ ವಿಸ್ತಾರವಾದ ಕವಡಿಕೆರೆ ಎಂಬ ನೈಸರ್ಗಿಕ ಪಕ್ಷಿಧಾಮವಿದೆ. ಇಲ್ಲಿ ರಾಜ್ಯದಲ್ಲಿಯೇ ದೊಡ್ಡದಾದ ಕಟ್ಟಿಗೆ ಡಿಪೋ ಕಿರವತ್ತಿಯಲ್ಲಿದೆ.

ವಿವಿಧ ಜನಾಂಗದ ಜನರು ಇಲ್ಲಿ ಬಂದು ನೆಲೆಸಿದ್ದಾರೆ. ಮತೀಯ ಸೌಹಾರ್ದತೆ ಇಲ್ಲಿ ಕಂಡುಬಂದಿದ್ದು ರಾಜ್ಯದಲ್ಲಿಯೇ ಅತಿ ಕಡಿಮೆ ದುಷ್ಕೃತ್ಯಗಳು ಇಲ್ಲಿ ದಾಖಲಾಗಿವೆ. ಅಲ್ಪ ಮಾತುಗಾರರು, ಸಹಾಯ ಪ್ರವೃತ್ತಿಯವರು ಆದ ಇಲ್ಲಿಯ ನಗರ ವಾಸಿಗಳು ಯಾವುದೇ ವಿಶೇಷ ಘರ್ಷಣೆಗಿಳಿಯದೇ ಅನ್ಯರೊಡನೆ ಮಧುರ ಬಾಂಧವ್ಯವನ್ನು ಹೊಂದಿದ್ದಾರೆ. ಕೃಷಿ ಮತ್ತು ಅರಣ್ಯ ಉತ್ಪನ್ನಗಳು ಇಲ್ಲಿಯ ಆರ್ಥಿಕತೆಯ ಜೀವನಾಡಿ. 2001 ರ ಜನಗಣತಿಯಂತೆ ಅಜಮಾಸು 23,000 ಕ್ಕೆ ಮುಟ್ಟಬಹುದಾದ ಸಂಭವನೀಯ ಜನಸಂಖ್ಯೆ ಯಲ್ಲಾಪುರ ಪಟ್ಟಣ ಹೊಂದಿದೆ. ಅಡಿಕೆ, ತೆಂಗು, ಭತ್ತ ಇಲ್ಲಿಯ ಮುಖ್ಯ ಕೃಷಿ ಬೆಳೆಗಳಾದರೆ ಇಲ್ಲಿಯ ಕಾಡುಗಳಲ್ಲಿ ಸಿಗುವ ಅಮೂಲ್ಯವಾದ ಸಾಗವಾನಿ, ಸೀಸಂ ಜೊತೆಗೆ ಹಲವಾರು ಕಿರು ಉತ್ಪನ್ನಗಳಾದ ಅಪ್ಪೆಹುಳಿ, ವಾಟೆಹುಳಿ, ಗೇರುಬೀಜ, ಸಂಬಾರ ಪದಾರ್ಥಗಳು ಮತ್ತು ಜೇನು ರಾಷ್ಟ್ರಾದ್ಯಂತ ಬೇಡಿಕೆಯನ್ನು ಹೊಂದಿದೆ. ದಕ್ಷಿಣ ಭಾರತದಲ್ಲಿಯೇ ಅತಿ ಹೆಚ್ಚು ಕಾಡುಜೇನು ಇಲ್ಲಿ ಉತ್ಪತ್ತಿಯಾಗುತ್ತಿದೆ. ಯಲ್ಲಾಪುರದ ಕಳಲೆ, ಅಪ್ಪೆ ಮಿಡಿ ಮತ್ತು ಅಣಬೆಗಳು ಅತ್ಯಂತ ಪ್ರಸಿದ್ಧಿಯನ್ನು ಹೊಂದಿವೆ.

ಬ್ರಹ್ಮಕುಮಾರಿ ಈಶ್ವರೀ ವಿಶ್ವವಿದ್ಯಾಲಯದ ದೇಶದ ಎರಡನೇ ಅತಿ ದೊಡ್ಡ ಆಧ್ಯಾತ್ಮಿಕ ಶಿಕ್ಷಣ ನೀಡುವ ಕೇಂದ್ರ ಇಲ್ಲಿದೆ. ರಾಜಸ್ಥಾನ ಮೂಲದ ಗೌಳಿಗರು, ಆಫ್ರಿಕಾ ಮೂಲದ ಸಿದ್ದಿಗಳು (ನಿಗ್ರೋ) ಇಲ್ಲಿ ವಾಸಿಸಿರುವುದು ವಿಶೇಷ.

## ಯಲ್ಲಾಪುರದಲ್ಲಿ ಗೌಡ ಸಾರಸ್ವತ ಬ್ರಾಹ್ಮಣರು

ಮೂರು ನಾಲ್ಕು ಶತಮಾನಗಳ ಹಿಂದಿನಿಂದ ಇಲ್ಲಿ ಗೌಡಸಾರಸ್ವತ ಬ್ರಾಹ್ಮಣ ನೆಲೆ ನಿಂತ ಬಗ್ಗೆ ದಾಖಲೆಗಳಿವೆ. ಇವರಲ್ಲಿ ಗೋವಾದಿಂದ ವಲಸೆ ಬಂದವರೇ ಹೆಚ್ಚು. 1917 ರಲ್ಲಿ ಇಲ್ಲಿ ಪ್ಲೇಗ ಸಾಂಕ್ರಾಮಿಕ ರೋಗ ಬಂದು ಊರಿನ ಜನಸಂಖ್ಯೆ 1000 ಕ್ಕಿಂತ ಕಡಿಮೆಯಾಯಿತು. ಆಗ ಇಲ್ಲಿ ಇದ್ದ ಜಿ.ಎಸ್.ಬಿ. ಕುಟುಂಬಗಳ ಸಂಖ್ಯೆ ಕೇವಲ ಏಳೆಂಟು ಮಾತ್ರ. ಆದರೂ ಇವರು ಯಲ್ಲಾಪುರ ಪೇಟೆಯ ಬಹುಭಾಗವಲ್ಲದೇ ಆಸುಪಾಸಿನ ಹಳ್ಳಿಯಲ್ಲಿಯ ಸಾವಿರಾರು ಎಕರೆ ಭೂಮಿಯ ಮಾಲಿಕರಾಗಿದ್ದರು. ಈಗ ದೀರ್ಘಕಾಲದ ಅಂತರದ ನಂತರವೂ ಇಲ್ಲಿ ಜಿ.ಎಸ್.ಬಿ. ಜನಸಂಖ್ಯೆ ಹೆಚ್ಚಾಗಿಲ್ಲ. ಯಲ್ಲಾಪುರದಲ್ಲಿ ಈಗ 110 ಜಿ.ಎಸ್.ಬಿ. ಕುಟುಂಬಗಳಿದ್ದು ಕೇವಲ 491 ಜನಸಂಖ್ಯೆಯನ್ನು ಹೊಂದಿದ್ದಾರೆ.

ದೇಶದ ಇತರೆಡೆಯಂತೆ ಇಲ್ಲಿ ಸಹ ಜಿ.ಎಸ್.ಬಿ. ಜನರು ಸ್ಥಳೀಯರೊಡನೆ ಒಂದಾಗಿ ಹೋಗಿದ್ದಾರೆ. ''ದೇವರಲ್ಲಿ ವಿಶ್ವಾಸವು ಜೀವನಕ್ಕೆ ಅರ್ಥವನ್ನೂ, ಉದ್ದೇಶವನ್ನೂ ನೀಡುತ್ತದೆ'' ಎಂಬ ಧ್ಯೇಯ ವಾಕ್ಯದ ಮೇಲೆ ನಂಬಿಕೆ ಇರುವ ಜಿ.ಎಸ್.ಬಿ. ಜನರು ಗ್ರಾಮದೇವತೆ, ಇಷ್ಟದೇವತೆಗಳಿಗಾಗಿ ಗುಡಿ ಗೋಪುರಗಳನ್ನು ನಿರ್ಮಿಸಿದ್ದಾರೆ. ರಕ್ತಗತವಾಗಿ ಬಂದ ಲಾಭದಾಯಕ ಉದ್ಯೋಗ ಮತ್ತು ಉದ್ದಿಮೆಗಳನ್ನು ಸ್ಥಾಪಿಸಿ ಇತರ ಜನಾಂಗದವರೊಡನೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದಾರೆ. ಇಲ್ಲಿಯ ಹಲವಾರು ಯುವಕ ಸಂಘಗಳು, ಶಿಕ್ಷಣ ಸಂಸ್ಥೆಗಳು, ಹಣಕಾಸು ಸಂಸ್ಥೆಗಳು ಮತ್ತು ಕ್ರೀಡಾ ಕೇಂದ್ರಗಳು ಇವರ ಸಹಕಾರದಿಂದ ಅಪಾರ ಜನಮೆಚ್ಚುಗೆಗಳಿಸಿ

ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ. ಬಹುಪಾಲು ಜನರು ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಹೊಂದಿದ್ದು ಭತ್ತವನ್ನು ಬೆಳೆಯುವುದೇ ಹೆಚ್ಚು. ಈಗೀಗ ಕೆಲವರು ಅಡಿಕೆ, ತೆಂಗು ಮತ್ತು ಮಾವುಗಳ ತೋಟಗಳನ್ನು ನಿರ್ಮಿಸುತ್ತಿದ್ದಾರೆ. ಯಾವುದೇ ರಾಜಕೀಯ ಪಕ್ಷದಲ್ಲಿ ಸಕ್ರಿಯವಾಗಿ ಭಾಗವಹಿಸದಿದ್ದರೂ ಎಲ್ಲ ರಾಜಕೀಯ ನೇತಾರರೂ ಇವರ ಸ್ನೇಹ, ಸಹಕಾರ ಹೊಂದಿದ್ದಾರೆ. ಜಿಲ್ಲೆಯಲ್ಲಿಯೇ ದೊಡ್ಡದಾದ ಅನ್ನಪೂರ್ಣ ರೈಸ್ ಇಂಡಸ್ಟ್ರೀಸ್ ಹಾಗೂ ರಾಜ್ಯದಲ್ಲಿಯೇ ದೊಡ್ಡದಾದ ಖಾಸಗೀ ಹಾಲು ಉತ್ಪನ್ನ ಘಟಕವಾದ ಶ್ರೀ ಕೃಷ್ಣಾ ಮಿಲ್ಕ್ಸ್ ಕಿರವತ್ತಿ ಇಲ್ಲಿದ್ದು ಅದು ಜಿ.ಎಸ್.ಬಿ. ಸಮಾಜದವರದೇ ಆಗಿದೆ.

ನಮ್ಮ ಸಮಾಜದ ಪರಮಪೂಜ್ಯ ಗುರುಗಳು, ಮಾರ್ಗದರ್ಶಕರೂ ಆದ ಪರ್ತಗಾಳಿ ಮಠಾಧೀಶ ಶ್ರೀಮದ್ ವಿದ್ಯಾಧಿರಾಜ ತೀರ್ಥ ಸ್ವಾಮೀಜಿವರ ನೇತೃತ್ವದಲ್ಲಿ ಮಠದ ನೂತನ ವಾಸ್ತು ನಿರ್ಮಾಣ ಹಾಗೂ ''ಶ್ರೀ ಲಕ್ಷ್ಮೀವೆಂಕಟರಮಣ'' ದೇವರ ಶಿಲಾ ವಿಗ್ರಹದ ಪ್ರತಿಷ್ಠೆಯೊಂದಿಗೆ ಇಲ್ಲಿಯ ಸಮಾಜ ಬಾಂಧವರ ಸಂಘಟನೆಗೆ ನಾಂದಿಯಾಯಿತು. 8-4-1983 ರಲ್ಲಿ ನಿರ್ಮಾಣ ಕಾರ್ಯ ಆರಂಭಿಸಿದ ಶ್ರೀಮಠವಾಸ್ತು ಈಗ ಸಕಲ ಸೌಕರ್ಯಗಳನ್ನು ಅಳವಡಿಸಿಕೊಂಡ ಕಲ್ಯಾಣಮಂಟಪ, ಸಭಾಗೃಹ, ಭೋಜನ ಶಾಲೆ ಹಾಗೂ ಇತರ ಸಾಮಗ್ರಿಗಳನ್ನು ಹೊಂದಿದೆ. ಶ್ರೀ ಮಠದಲ್ಲಿ ವರ್ಷಾದ್ಯಂತ ನಡೆಯುತ್ತಿರುವ ಹಲವಾರು ದೇವತಾ ಕಾರ್ಯಗಳಲ್ಲಿ ಅನ್ಯ ಸಮಾಜದವರು ಉತ್ಸಾಹದಿಂದ ಪಾಲ್ಗೊಳುತ್ತಾರೆ. ಇಲ್ಲಿಯ ಕಲ್ಯಾಣ ಮಂಟಪ ಮತ್ತು ಸಭಾಗೃಹಗಳನ್ನು ಜಾತಿ-ಮತ ಭೇದವಿಲ್ಲದೆಯೆ ಹಿಂದು ಸಮಾಜದ ಸರ್ವರಿಗೂ ಪ್ರಯೋಜನಕ್ಕಾಗಿ ನೀಡಲಾಗುತ್ತಿದೆ.

ಸನ್ 2002 ರಲ್ಲಿ ಶ್ರೀ ಗುರುಗಳ ಚಾತುರ್ಮಾಸ ವ್ರತಾಚರಣೆ ಕಾರ್ಯಕ್ರಮವು ಯಲ್ಲಾಪುರದ ಮಠದಲ್ಲಿ ವಿಜೃಂಭಣೆಯಿಂದ ನಡೆಯಲ್ಲಿದ್ದು ಸಮಾಜದ ಎಲ್ಲ ಸಹೃದಯಿ ಬಾಂಧವರಿಂದ ಸಹಕಾರ ಅವಶ್ಯವಿದೆ. 20 ಮೇ 2001 ರವಿವಾರದಂದು ಇಲ್ಲಿ ನಡೆದ ತೃತೀಯ ಜಿ.ಎಸ್.ಬಿ. ಯುವವಾಹಿನಿ ಸಮಾವೇಶದ ನೆನಪಿನ ಕಾಣಿಕೆ ''ಸಾರಸ್ವತ ಸೌರಭ'' ಮಾಹಿತಿ ಪುಸ್ತಕ ಸಮಾಜ ಬಾಂಧವರಿಗೆ ನಮ್ಮತನದ ಅರಿವು ತರಲಿ ಎಂಬುದೇ ಹಾರೈಕೆ.

**ಶ್ರೀ ಗಜಾನನ ಬಾಬುರಾವ್ ಭಟ್**
ಸ್ವಾಗತ ಸಮಿತಿ ಗೌರವಾಧ್ಯಕ್ಷರು
ತೃತೀಯ ಜಿ.ಎಸ್.ಬಿ. ಯುವವಾಹಿನಿ ಜಿಲ್ಲಾ ಸಮಾವೇಶ
ಶ್ರೀ ಲಕ್ಷ್ಮೀ ನಾರಾಯಣ ವೆಂಕಟ್ರಮಣಮಠ, ಯಲ್ಲಾಪುರ





# ದಾಕ್ಷಿಣಾತ್ಯ ಗೌಡ ಸಾರಸ್ವತ ಬ್ರಾಹ್ಮಣರ ವೈದಿಕ, ದೈವಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಪರಂಪರೆ

**ಲೇಖಕರು : ಕೀರ್ತನ ಕೇಸರಿ,**
**ಸಂತ ಬದ್ರಗಿರಿ ಅಚ್ಯುತದಾಸಜಿ, ಬೆಂಗಳೂರು.**

ಶ್ರೀ ಗೌಡದೇಶಾಂತರ್ಗತ ತ್ರಿಹೋತ್ರಪುರದಿಂದ ಶ್ರೀ ಪರಶುರಾಮರು ದಕ್ಷಿಣಕ್ಕೆ ತಂದ ದಶಗೋತ್ರದ ಸಾರಸ್ವತ ಬ್ರಾಹ್ಮಣರು ಶುದ್ಧ ವೈದಿಕ ಪಂಥದವರು. ಭೃಗು ಕುಲೋತ್ಪನ್ನ ಮಹರ್ಷಿಗಳಲ್ಲಿ ಭೃಗುವಿನ ಸ್ಥಾನ ಬಹಳ ಶ್ರೇಷ್ಠವಾದದ್ದು. ಶ್ರೀ ಭಗವದ್ಗೀತೆಯ ವಿಭೂತಿ ಯೋಗದಲ್ಲಿ ಶ್ರೀ ಕೃಷ್ಣ ಪರಮಾತ್ಮನು ॥ ಮಹರ್ಷಿಣಾಂ ಭೃಗುರಹಂ॥ ಎಂದು ಉದ್ಧರಿಸುತ್ತಾರೆ . ಭೃಗು ಋಷಿಗಳ ಶಿಷ್ಯ ಚ್ಯವನ ಮಹರ್ಷಿಗಳು, ಅವರ ಪುತ್ರ ದಧೀಚಿ ಮತ್ತು ದಧೀಚಿ ಮಹರ್ಷಿಗಳ ಪುತ್ರರೆ ಸಾರಸ್ವತಮಹರ್ಷಿಗಳು. ಸಾರಸ್ವತ ಮಹರ್ಷಿಗಳಿಗೆ ಎಳೆಯ ಪ್ರಾಯದಲ್ಲಿಯೇ ಮಾತಾಪಿತೃರ ವಿಯೋಗವಾಗುತ್ತದೆ. ಅನಾಥ ಬಾಲಕ ಸಾರಸ್ವತನಿಗೆ ಸಾಕ್ಷಾತ ದೇವಮಾತಾ ಸರಸ್ವತಿಯ ದಯೆಯಿಂದ ಸರ್ವವೇದಗಳು ಹೃದ್ಗತವಾಗುತ್ತವೆ.

ಪ್ರಾಚೀನ ವೇದ ಕಾಲದಲ್ಲಿ ಸರಸ್ವತಿ ನದಿ ತೀರದಲ್ಲಿ ಭಾರಿ ಭೂಕಂಪ, ಜ್ವಾಲಾಮುಖಿ ಇತ್ಯಾದಿ ಪ್ರಕೃತಿ ಪ್ರಕೋಪದಿಂದ ಭೀಕರ ಕ್ಷಾಮ ಉಂಟಾಯಿತು. ಸತತ ಹನ್ನೆರಡು ವರ್ಷ ಬರಗಾಲ ಬಂದಿದ್ದರಿಂದ ಸರಸ್ವತೀ ತೀರ ನಿವಾಸಿ ಸಾರಸ್ವತ ಬ್ರಾಹ್ಮಣರು ಭಾರತದ ಬೇರೆ ಬೇರೆ ಸ್ಥಳಗಳಿಗೆ ಹೋಗಿ ಅಲ್ಲಿಯೇ ನೆಲೆಸಿದರು. ಅಂಥ ಕ್ಷಾಮದ ಸಮಯದಲ್ಲಿ ಸಾರಸ್ವತ ಮುನಿಗಳು , ದೇವಿ ಸರಸ್ವತಿಯ ಪ್ರೇರಣೆಯಿಂದ ಸರಸ್ವತಿ ನದಿ ತೀರದಲ್ಲಿ ಆಪತ್ಕಾಲದಲ್ಲಿ ಅಭೋಕ್ಷ ಭಕ್ಷಣೆಯನ್ನು ಮಾಡಿಯೂ ಕೂಡ ವೇದವನ್ನು ಉಳಿಸಿ ಬೆಳೆಸಿದರು. ಇಂದಿಗೂ ಎರಡು ಸಾವಿರ ವರ್ಷಗಳ ಹಿಂದೆ ಬುದ್ಧ ಚರಿತಂ ಗ್ರಂಥ ಬರೆದ ಅಶ್ವಘೋಶರು ಹೇಳುತ್ತಾರೆ.

**ಸಾರಸ್ವತಶ್ಚಾಪಿ ಜಗಾದನಷ್ಟಂ ವೇದಂ ಪುನರ್ಯಂ ದದೃಶುರ್ನಪೂರ್ವೇ।**
**ವ್ಯಾಸಸ್ತಥೈನ ಬಹುಧಾಚಕಾರ ನಯಂ ವಸಿಷ್ಠಃ ಕೃತವಾನ್ ನ ಶಕ್ತಿ ಃ ॥**

ಎರಡು ಸಾವಿರ ವರ್ಷಗಳ ಹಿಂದೆ ವೇದ ನಷ್ಟವಾಗದಂತೆ ಕಾಪಾಡಿಕೊಂಡು ಬಂದವರು ಶ್ರೀ ಸಾರಸ್ವತ ಮುನಿ ಮಹಾತ್ಮರು. ಸಾರಸ್ವತ ಪಾಠವು ಪ್ರಮಾಣವೆಂದು ವೇದ ಭಾಷ್ಯಕಾರರಾದ ಸಾಯಣಾಚಾರ್ಯರು ಹೇಳುತ್ತಾರೆ.

**ಕತಿಪಯ ಮಂತ್ರಭಾಗ ಮಿಶ್ರಿತಂ - ತತ್ ಸಾರಸ್ವತ ಪಾಠಾನುಸಾರೇಣ ಇತಿ ಜ್ಞಾತವ್ಯಂ**

ಸಂಹಿತೆಗಳಲ್ಲಿ ಪ್ರಕ್ಷಿಪ್ತ ವಿಷಯಗಳೇನಾದರೂ ಇದ್ದಲ್ಲಿ ಆಗ ಸಾರಸ್ವತ ಪಾಠವನ್ನು ಪ್ರಮಾಣವೆಂದು ತೆಗೆದುಕೊಳ್ಳಬೇಕಾಗಿ ಹೇಳುತ್ತಾರೆ.

ಕಾಲಾನಂತರ ಕ್ಷಾಮವು ಅಡಗಿ ಸುಭಿಕ್ಷವಾಗುತ್ತದೆ. ಆಗ ಸರಸ್ವತಿ ನದಿ ತೀರದ ಸಾರಸ್ವತರು ಸ್ವಸ್ಥಾನಕ್ಕೆ ಮರಳುತ್ತಾರೆ. ಆಗ ಸಾರಸ್ವತ ಮುನಿಗಳು ಅವರಿಗೆ ವೇದಾಧ್ಯಯನ ಮಾಡಿ ಮಾರ್ಗದರ್ಶನ ಮಾಡುತ್ತಾರೆ ಎಂದು ಮಹಾ ಭಾರತದ ಶಲ್ಯ ಪರ್ವದಲ್ಲಿ ಹೇಳುತ್ತ ಅವರ ಸಂಖ್ಯೆ 60000 ಎಂದು ಹೇಳಿದೆ.

**ಷಷ್ಠಿರ್ಮುನಿ ಸಹಸ್ರಾಣಿ ಶಿಷ್ಯತ್ವಂ ಪ್ರತಿಪೇದಿರೇ ।**
**ಸಾರಸ್ವತಸ್ಯ ವಿಪ್ರರ್ಷೇಃ ವೇದ ಸ್ವಾಧ್ಯಾಯ ಕಾರಣಾತ್ ॥**

ಬಾಲಕರಾದ ಸಾರಸ್ವತರ ಹತ್ತಿರ ವೇದ ಕಲಿಯುತ್ತಿದ್ದವರು ವೃದ್ಧರು. ಅವರು ಗುರುವಿಗಾಗಿ ಆಸನ ಸಿದ್ಧಪಡಿಸಲು ಒಂದೊಂದು ಮುಷ್ಟಿ ದರ್ಭೆಯನ್ನು ತರುತ್ತಿದ್ದರು. ಅಂಥ ಶಿಷ್ಯರ ಸಂಖ್ಯೆ 60 ಸಾವಿರ ಎಂಬ ವಿವರ ಮಹಾಭಾರತದ ಶಲ್ಯಪರ್ವದಲ್ಲಿ ಬರುತ್ತದೆ. ( ಮಹಾಭಾರತ - ಶ.ಪ. 50-51).

ವಿದ್ಯೆಯ ಅಭಿಮಾನದೇವತೆ ಸರಸ್ವತಿ. ವಿದ್ಯಾವಂತರಿಗೆ ಸಾರಸ್ವತರು ಅಥವಾ ಸರಸ್ವತಿ ಪುತ್ರರೆಂದು ಹೇಳುತ್ತಾರೆ. ಇದರ ನಿಜವಾದ ಅರ್ಥವೆಂದರೆ ದಧೀಚಿ ಮಹರ್ಷಿಗಳ ಪುತ್ರರೇ ಸಾರಸ್ವತರು. ಈ ಹೆಸರನ್ನು ಅವರಿಗೆ ಇಟ್ಟವಳು ವೇದಮಾತಾ ಸರಸ್ವತಿ.

**"ಸಾರಸ್ವತ ಇತಿ ಖ್ಯಾತೋ ಭವಿಷ್ಯತಿ ಮಹಾತಪಾಃ ।**
**ಸಾರಸ್ವತ ಮಹಾಭಾಗೋ ವೇದನಧ್ಯಾಪಯತಿ ॥"(ಮಹಾಭಾರತ - ಶ-22)**

ಇವರು ಮುಂದೆ ಸಾರಸ್ವತ ಎಂಬ ಹೆಸರಿನಿಂದ ಖ್ಯಾತರಾಗುತ್ತಾರೆ, ಮತ್ತು ಸಕಲರಿಗೂ ವೇದವನ್ನು ಕಲಿಸುತ್ತಾರೆ ಎಂದು ವೇದಮಾತಾ ಸರಸ್ವತಿಯು ಹೇಳುತ್ತಾಳೆ.ವೇದ ವಿದ್ಯಾಪಾರಂಗತರನ್ನು ಸಾರಸ್ವತರೆನ್ನುತ್ತಾರೆ. ಸಾರಸ್ವತವೆನ್ನುವದು ಒಂದು ಸಂಸ್ಕೃತಿ ಅದು ಹೆಸರಲ್ಲ. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ಹೆಚ್ಚಾಗಿ ನದಿ ತೀರದಲ್ಲಿ ವಾಸಿಸುತ್ತಿದ್ದರು. ಅಂಥ ಬ್ರಾಹ್ಮಣರನ್ನು ಆಯಾ ನದಿಯ ಹೆಸರಿನಿಂದ ಸಂಭೋಧಿಸುತ್ತಿದ್ದರು. ಗಂಗಾನದಿ ತೀರದ ಬ್ರಾಹ್ಮಣರಿಗೆ "ಗಾಂಗೇಯ ", ಮಾಹೇ ನದಿ ತೀರದ ನಿವಾಸಿಗಳಿಗೆ "ಮಾಹೇಯ ", ಮಾಲವೀ ನದಿ ತೀರದ ನಿವಾಸಿಗಳಿಗೆ "ಮಾಲವೀಯ ", ಅದೇ ರೀತಿ ಸರಸ್ವತಿ ನದಿ ತೀರದವರನ್ನು " ಸಾರಸ್ವತ "ರೆಂದು ಕರೆಯುತ್ತಾರೆ. ಸರಸ್ವತಿ ಮತ್ತು ದ್ರಷದ್ವತಿ ಈ ಎರಡೂ ನದಿಗಳ ನಡುವಿನ ಪ್ರದೇಶಕ್ಕೆ ಸಾರಸ್ವತ ದೇಶ ಎಂಬ ಹೆಸರು. ಈ ಪ್ರದೇಶಕ್ಕೆ ಬ್ರಾಹ್ಮಾವರ್ತ, ಆರ್ಯಾವರ್ತ ಎಂಬ ಹೆಸರುಗಳು ಇವೆ.

ಸರಸ್ವತಿ ನದಿಯ ಉಗಮಸ್ಥಾನದಿಂದ (ಪ್ರಕ್ಷ ಪ್ರಸ್ರವಣೆ , ಮೌಂಟ ಎವರೆಸ್ಟ) ಮಾರವಾಡ ದೇಶದ ವಿನಶನ ವರೆಗಿನ ಈ ಪ್ರದೇಶವನ್ನು ಸಪ್ತ ಸಾರಸ್ವತ ಎಂದು ಕರೆಯುತ್ತಾರೆ. ಸಾರಸ್ವತ ರು ತಮ್ಮ ಸ್ವಸ್ಥಾನವನ್ನು ಬಿಟ್ಟು ಎಲ್ಲೆಲ್ಲಿ ಹೋಗಿ ವಾಸಿಸುತಿದ್ದರೊ ಅವರನ್ನು ಆಯಾ ಪ್ರದೇಶದ ಹೆಸರಿನಿಂದ ಗುರುತಿಸುತ್ತಾರೆ. **ಗೌಡ** ಸಾರಸ್ವತ , **ಮೈಥಿಲಿ** ಸಾರಸ್ವತ ,**ಕನ್ಯಾಕುಬ್ಜ** ಸಾರಸ್ವತ , **ಕಾಶ್ಮೀರಿ** ಸಾರಸ್ವತ ಎಂದು ಕರೆಯುವುದು ವಾಡಿಕೆ. ಸಾರಸ್ವತ ಮುನಿಗಳ ತಂದೆಯವರು ದಧೀಚಿ ಅವರ ಆಶ್ರಮ ಸರಸ್ವತಿ ನದಿ ತೀರದಲ್ಲಿ ಇತ್ತು. ಅವರು ಭೃಗು ಕುಲೋತ್ಪನ್ನರಾದರೂ ಕೂಡ ದೇಶವಾಚಕ ಶಬ್ಧದಿಂದಾಗಿ ಅವರು ಸಾರಸ್ವತರು. ಅವರ ಪುತ್ರನಿಗೆ ಸಾಕ್ಷಾತ ವೇದಮಾತಾ , ಸರಸ್ವತಿ ದೇವಿಯೇ ಸಾರಸ್ವತ ಎಂಬ ಹೆಸರನ್ನು ದಯಪಾಲಿಸುತ್ತಾಳೆ. ಬೃಹ್ಮನ ಹತ್ತು ಮಾನಸ ಪುತ್ರರಲ್ಲಿ ಭೃಗು ಪ್ರಥಮರು, ಅಂಥ ಭೃಗುವಿನ ಮೊಮ್ಮಗ ದಧೀಚಿ. ಈ ಭೃಗುಕುಲದ ಋಚೀಕ ಮುನಿಗಳ ಪುತ್ರ ಜಮದಗ್ನಿ ಮತ್ತು ರೇಣುಕಾರ ಇವರ ಇವರ ಸುಪುತ್ರರೆ ಪರಶುರಾಮರು. ದೇಶವಾಚಕ ಮತ್ತು ಕುಲಪರಂಪರೆಯಿಂದ ಪರಶುರಾಮರು **ಸಾರಸ್ವತ ಬ್ರಾಹ್ಮಣರು.** ವೈದಿಕ ಧರ್ಮವನ್ನು ಉಳಿಸುವದಕ್ಕಾಗಿ ಪರಸುರಾಮರು ದುಷ್ಟ ಕ್ಷತ್ರಿಯರನ್ನು ಸಂಹರಿಸಿ ಯಜ್ಞಪರಂಪರೆ

ಯನ್ನು ಬೆಳೆಸುತ್ತಾರೆ. ಶ್ರೌತ, ಸ್ಮಾರ್ತ ಕರ್ಮಾನುಷ್ಠಾನವನ್ನು ಪ್ರಚಾರಕ್ಕೆ ತಂದ್ದಿದ್ದರಿಂದ ಅವರು ಯಜ್ಞಪುರುಷ ,ಯಜ್ಞಾಂತರ್ಯಾಮಿ ಎಂದು ಪ್ರಸಿದ್ದರಾದರು. ಕ್ಷತ್ರಿಯರನ್ನು ಸಂಹರಿಸಿ ಜಯಿಸಿದ ರಾಜ್ಯ ಸರ್ವಸ್ವವನ್ನು ಅವರು ತಮ್ಮ ಗುರು ಕಶ್ಯಪರಿಗೆ ದಾನ ಮಾಡಿದ ಸ್ಥಳದಲ್ಲಿ ತಾವು ವಾಸಿಸಬಾರದೆಂದು ಸಮುದ್ರರಾಜನಿಂದ (ಪಶ್ಚಿಮ ಸಿಂಧು) ಎಂಬ ಪ್ರದೇಶವನ್ನು ಪಡೆದು ಅದಕ್ಕೆ ಶೂರ್ಪಾರಕ ಅಥವಾ **ಕೊಂಕಣ** ಎಂದು ಹೆಸರಿಸುತ್ತಾರೆ.

ಮಹಾಭಾರತದ ಭೀಷ್ಮಪರ್ವದಲ್ಲಿ ಕೊಂಕಣ ದೇಶದ ಹೆಸರಿನ ಉಲ್ಲೇಖವಿದೆ. ಬ್ರಹತ್ ಸಂಹಿತೆಯಲ್ಲಿ ವರಾಹಮಿಹಿರನು ಕೊಂಕಣ ದೇಶದ ಬಗ್ಗೆ ವಿವರಿಸುತ್ತ ಪರಶುರಾಮರ ಮಾತೆ ರೇಣುಕಾ ದೇವಿಗೆ ಕೊಂಕಣಾದೇವಿ ಎಂಬ ಹೆಸರೂ ಕೂಡ ಇದೆ ಎಂದು ತಿಳಿಸಿದ್ದಾರೆ. ತಾನೇ ಸೃಷ್ಟಿಸಿದ ನವೀನ ಸೃಷ್ಟಿಗೆ ಪರಶುರಾಮರು ತಮ್ಮ ಮಾತೆಯ ಹೆಸರನ್ನು ನೀಡಿ ಕೊಂಕಣ ದೇಶವೆಂದು ಕರೆದರು. ಬ್ರಾಹ್ಮಣೀ ಭಾಷೆಯಾದ ಕೊಂಕಣಿಯು ಸಂಸ್ಕೃತದ ಪ್ರಾಕೃತ ಸ್ವರೂಪ. ಪರಶುರಾಮರ ಮಾತ್ರ ಭಾಷೆಯೂ ಕೂಡ ಕೊಂಕಣಿ ಅದುದರಿಂದಲೇ ಅವರು ದೇಶದ ಹೆಸರನ್ನು ಭಾಷೆಗೂ ಕೂಡ ನೀಡಿದರು.

## ಸಾರಸ್ವತರ ಕುಲದೇವರು ಮತ್ತು ಮತ ಸಿದ್ಧಾಂತ

ಶ್ರೀ ಭಗವಾನ ಪರಶುರಾಮರು ತಮ್ಮ ನೂತನ ಸೃಷ್ಟಿಯಾದ ಕೊಂಕಣ ದೇಶದಲ್ಲಿ ಯಜ್ಞ ಸಂಸ್ಕೃತಿಯ ಪರಂಪರಯನ್ನು ಮುಂದುವರಿಸುವದಕ್ಕಾಗಿ ತಮ್ಮ ಸಾರಸ್ವತ ಕುಲದ ಶ್ರೇಷ್ಠ ದಶಗೋತ್ರಿ ವೈದಿಕ ಯಾಜ್ಞಿಕರಾದ ಗೌಡದೇಶಾಂತರ್ಗತ ತ್ರಿಹೋತ್ರ ಪುರ ನಿವಾಸಿಗಳನ್ನು ಆರಿಸಿ ಅವರನ್ನು ಗೋಮಾಂತಕಕ್ಕೆ ಕರೆತಂದರು. ಈ ವಿವರವನ್ನು ಸ್ಕಾಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ಹೇಳಿದೆ.

**ಪಶ್ಚಾತ್ ಪರಶುರಾಮೇಣ ಹ್ಯಾನೀತಾ ಮುನಯೋ ದಶಾ ।**
**ತ್ರಿಹೋತ್ರವಾಸಿನಶ್ಚೈವ ಪಂಚಗೌಡಾಂತರೇಸ್ಥಿತಾಃ॥**
**ಗೋಮಾಂಚಲೇ ಸ್ಥಾಪಿತಾಸ್ತೇ ಪಂಚಕ್ರೋಶಾಂ ಕುಶಸ್ಥಲೇ ॥**

ಭಾರ್ಗವರಾಮನು ದಶಗೋತ್ರಿ ಬ್ರಾಹ್ಮಣರನ್ನು ಗೋಮಾಂತಕಕ್ಕೆ ತರುವಾಗ ಆ ಬ್ರಾಹ್ಮಣರು ಅವರವರ ಕುಲದೇವರನ್ನೂ ಕೂಡ ತಂದರು ಎಂಬ ವಿವರವು ಸ್ಕಾಂದ ಪುರಾಣದಲ್ಲಿ ಬರುತ್ತದೆ.

ಸರ್ವ ಬ್ರಾಹ್ಮಣರ ಆಚಾರನಿಷ್ಠ ಉಪಾಸನಾ ದೇವತೆಗಳು ಬೇರೆ ಬೇರೆ ಯಾಗಿದ್ದರೂ , ಆಚಾರಗಳು ಸರ್ವೇ ಸಾಮಾನ್ಯವಾಗಿ ಒಂದೇ ಸಮನಾಗಿದ್ದವು. ಆಚಾರ ಅನುಷ್ಠಾನಗಳು ಅಂತಃಕರಣ ಶುದ್ಧಿಗಾಗಿ ಇರುತ್ತವೆ. ಅಂತಃಕರಣ ಶುದ್ಧದೊಡನೆಯೇ ಆಧ್ಯಾತ್ಮ ಚಿಂತನೆಯ ಅಧಿಕಾರ ಪ್ರಾಪ್ತವಾಗುತ್ತದೆ. ಶಾಕ್ತ, ಶೈವ, ವೈಷ್ಣವ, ಗಾಣಪತ್ಯ , ಸೌರ ಇತ್ಯಾದಿ ಉಪಾಸನಾ ಭೇದವು ಪೂರ್ವದಿಂದಲೂ ಇತ್ತು. ಇವೆಲ್ಲಕ್ಕೂ ವೇದವೇ ಪ್ರಮಾಣಿ ಭೂತವು. ಸಾರಸ್ವತರಲ್ಲಿ ಈ ಉಪಾಸನಾ ಭೇದವು ಮುಂಚಿನಿಂದಲೂ ಇತ್ತು. ಮಂಗೇಶ, ನಾಗೇಶ, ಶಿವಸ್ವರೂಪರು. ನರಸಿಂಹ, ದಾಮೋದರ, ದೇವಕಿಕೃಷ್ಣ, ವಿಷ್ಣುಸ್ವರೂಪ. ಮಹಾಲಕ್ಷ್ಮಿ, ಮ್ಹಾಳಸಾ ಲಕ್ಷ್ಮಿ, ಮೋಹಿನಿ ಸ್ವರೂಪ. ಶಾಂತಾದುರ್ಗಾ, ಕಾಮಾಕ್ಷಿ, ಶಾಕ್ತಸ್ವರೂಪ . ನಾಥ ಪಂಥದ ರವಳನಾಥ ಮಲ್ಲಿನಾಥ, ಬೇತಾಳ, ಅದೇ ರೀತಿ ಶಕ್ತಿ ಪಂಥದ ಭೈರವ, ಗಾಣಪತ್ಯದ ಗಣಪತಿ ಈ ಸರ್ವ ಉಪಾಸನಾಬೇಧಗಳು ಇದ್ದವು.

ಇವರಲ್ಲಿ ಕೆಲವರು ಮಾಂಸಾಹಾರಿ ವಾಮಪಂಥಿ ಜನರೂ ಇದ್ದರು. ದಶಗೋತ್ರ ಬ್ರಾಹ್ಮಣರು ಗೋಮಾಂತಕದಲ್ಲಿ ಸ್ಥಾಪನೆಗೊಂಡ ಸಹಸ್ರಾರು ವರ್ಷಗಳ ನಂತರವೂ ಕೂಡ ಉತ್ತರದ ಸಾರಸ್ವತರು

ದಕ್ಷಿಣ ದೇಶಕ್ಕೆ ಬರುತ್ತಲೇ ಇದ್ದರು. ಉತ್ತರದಲ್ಲಿ ಮುಸಲ್ಮಾನರ ಆಕ್ರಮಣದ ಪರಿಣಾಮವಾಗಿ ಸಾರಸ್ವತರ ವಸತಿ ದಕ್ಷಿಣದಲ್ಲಿ ಬೆಳೆಯಿತು . ಬೇರೆ ಬೇರೆ ಕಾಲದಲ್ಲಿ ವಿಭಿನ್ನ ಪ್ರದೇಶದಲ್ಲಿ ನೆಲೆಸಿದ ಸಾರಸ್ವತರು ಕೊಂಕಣ ದೇಶಕ್ಕೆ ಬಂದರೆಂದು ತೋರುತ್ತದೆ. ಆದರಿಂದ ಕಾಲಾಂತರಗಳಲ್ಲಿ ಬಂದ ಸಾರಸ್ವತರ ಗೋತ್ರಗಳನ್ನು ಗಣನೆಗೆ ತೆಗೆದುಕೊಂಡರೆ ಅಜಮಾಸ ಇಪ್ಪತ್ತು ಇಪ್ಪತ್ತೊಂದು ಗೋತ್ರಗಳಾಗುತ್ತವೆ.

## ಸಾರಸ್ವತ ಬ್ರಾಹ್ಮಣರ ಧರ್ಮಪೀಠ ಮತ್ತು ಧರ್ಮಾಚಾರ್ಯರು

### ಶ್ರೀಶ್ರೀ ಗೌಡಪಾದಾಚಾರ್ಯರು - ಶ್ರೀ ಕೈವಲ್ಯಮಠ



ಶ್ರೀ ಗೌಡಪಾದಾಚಾರ್ಯರು ಮಾಂಡುಕ್ಯೋಪನಿಷತ್‌ನ ಆಧಾರದಿಂದ ಅಜಾತವಾದ ಮತ್ತು ಆಲಾತವಾದ ನಾಮಕ ಅದ್ವೈತ ವೇದಾಂತ ಪ್ರಪ್ರಥಮವಾಗಿ ಪ್ರಕಟಿಸಿ, ಅವೈದಿಕ ಬುದ್ಧ ಜೈನಾದಿ ಮತದ ನಿರಾಕರಣೆ ಮಾಡಿದರು. ಅವರ ಶಿಷ್ಯರು ಶ್ರೀ ಗೋವಿಂದ ಯತಿಗಳು. ಗೋವಿಂದಯತಿಗಳ ಶಿಷ್ಯ ಆದಿ ಶಂಕರಾಚಾರ್ಯರು ತಮ್ಮ ಗುರುವಿನ ಅದ್ವೈತ ವೇದಾಂತವನ್ನು ಅಸೇತು ಹಿಮಾಚಲದವರೆಗೆ ಪ್ರಚಾರ ಮಾಡಿ ಯಶಸ್ಸನ್ನು ಪಡೆದುದ್ದರಿಂದ ಅವರನ್ನು ಶಾಂಕರ ವೇದಾಂತರೆಂದು ಕರೆದರು. ತತ್ವಜ್ಞಾನದ ಆದಿಗುರು ಸಾರಸ್ವತ ಕುಲೋದ್ಧಾರಕ ಶ್ರೀ ಗೌಡಪಾದಾಚಾರ್ಯರು ಶ್ರೀ ಗೌಡ ಸಾರಸ್ವತರ ಆದಿಮಠದ ಈ ಪರಂಪರೆಯಲ್ಲಿ ಈಗ ವಿರಾಜಮಾನ ರಾಗಿರುವ ಶ್ರೀ ಸಚ್ಚಿದಾನಂದ ಸರಸ್ವತಿ ಮಹಾರಾಜರು ಪರಮ ವೈರಾಗ್ಯಮೂರ್ತಿ. ತಪಸ್ವಿಗಳಾದ ಇವರ ಶಿಷ್ಯರು ತೇಜೋಮೂರ್ತಿ ಶ್ರೀ ಶಿವಾನಂದ ಸರಸ್ವತಿ ಮಹಾರಾಜರು.

ಶ್ರೀ ಗೌಡ ಸಾರಸ್ವತರ ಈ ಆದಿಮಠವು ಗೋಮಾಂತಕದ ಕವಳೆ ಎಂಬ ಸ್ಥಳದಲ್ಲಿ ನಿಸರ್ಗ ರಮಣೀಯ ಪ್ರದೇಶದಲ್ಲಿ ವಿರಾಜಮಾನವಾಗಿದೆ. ವೈದಿಕ ಪರಂಪರೆಯ ಈ ಆದಿಮಠದ ಆರಾಧ್ಯ ದೇವರು ಶ್ರೀ ಭವಾನಿ ಶಂಕರ.

### ಶ್ರೀ ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ



ದಾಕ್ಷಿಣಾತ್ಯ ವೈಷ್ಣವ ಸಾರಸ್ವತರ ಇನ್ನೊಂದು ಗುರುಪೀಠ ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ. ಉಡುಪಿ ಕ್ಷೇತ್ರದ ಅಷ್ಟಮಠಗಳ ಪೈಕಿ ಫಲಿಮಾರು ಮಠದ ಶ್ರೀ ರಾಮಚಂದ್ರ ತೀರ್ಥ ಸ್ವಾಮಿಗಳು ಬದರಿ ಕ್ಷೇತ್ರದಲ್ಲಿ ಸರ್ವಶಾಸ್ತ್ರ ಸಂಪನ್ನರಾಗಿದ್ದ ಶ್ರೀ ಮಾಧವ ನಾಮಕ ಸಾರಸ್ವತ ಬ್ರಾಹ್ಮಣ ಬ್ರಹ್ಮಚಾರಿಗೆ ಸನ್ಯಾಸ ದೀಕ್ಷೆ ನೀಡಿ ಶ್ರೀ ನಾರಾಯಣ ತೀರ್ಥರು ಎಂಬ ನಾಮಾಭಿದಾನವನ್ನು ನೀಡಿದರು. ಈ ಪರಂಪರೆಯಲ್ಲಿ ಈಗ ಪೀಠಸ್ಥರಾಗಿರುವ ಕಠೋರ ತಪಸ್ವಿ, ಶಿಷ್ಯವತ್ಸಲ ಸರ್ವಶಾಸ್ತ್ರ ಸಂಪನ್ನರಾಗಿರುವ ಶ್ರೀಮದ್ ವಿದ್ಯಾಧಿರಾಜ ತೀರ್ಥ ಶ್ರೀಪಾದ ವಡೇರ ಸ್ವಾಮಿಗಳು. ಪ್ರಯಾಗದಲ್ಲಿ ಕಲ್ಪವಾಸ ಮಾಡಿ ಬದರಿಯಲ್ಲಿ ಪರಮಧಾಮವೆನಿಸಿರುವ ಸಾಲಿಗ್ರಾಮ ಕ್ಷೇತ್ರ ಶ್ರೀ ದಾಮೋದರ ಕುಂಡಕ್ಕೆ ಪಾದಯಾತ್ರೆಯನ್ನು ಕೈಗೊಂಡವರು. ಅನೇಕ ದುರ್ಗಮ ಪವಿತ್ರ ತೀರ್ಥಗಳಲ್ಲಿ ಅವಗಾಹನ ಸ್ನಾನಾದಿಗಳನ್ನು ಮಾಡಿ ಆ ಪುಣ್ಯವನ್ನು ಸಾರಸ್ವತ ಸಮಾಜಕ್ಕೆ ಹಾಗೂ ಭಾರತ ರಾಷ್ಟ್ರಕ್ಕೆ ನೀಡಿದ ಯುಗಪುರುಷರು.ಈ ಧರ್ಮಾಚಾರ್ಯರ ಮೂಲ ಮಠ ಪರ್ತಗಾಳಿ . ಅನೇಕಾನೇಕ ಶಾಖಾಮಠ ಮಂದಿರಗಳನ್ನು ಜೀರ್ಣೋದ್ಧಾರ ಮಾಡಿ ಸಮಾಜವನ್ನು ಉದ್ಧರಿಸಿದ ಮಹಾನುಭಾವರು.

## ಶ್ರೀ ಶ್ರೀ ಕಾಶೀಮಠ



ಗೋಮಾಂತಕ ಅದರಂತೆ ಕರ್ನಾಟಕದ ತುಳು ಪ್ರದೇಶದಲ್ಲಿ ಪ್ರಸರಿಸಿದ ಸಾರಸ್ವತರು ಶ್ರೀ ಮಧ್ವಮತವನ್ನು ಸ್ವೀಕರಿಸಿ ಅದರ ಪ್ರಚಾರಕೋೋಸ್ಕರ ಮತ್ತು ಸಮಾಜಕ್ಕೆ ಒಂದು ಗುರು ಪೀಠ ಬೇಕೆಂದು ಅಪೇಕ್ಷಿಸಿದ ಕಾರಣದಿಂದ ಕುಂಭಕೋಣ ಮಠದ ಶ್ರೀ ವಿಜಯೇಂದ್ರತೀರ್ಥ ಸ್ವಾಮಿಗಳು ಕೇರಳ ನಿವಾಸಿ ಸಾರಸ್ವತ ಬ್ರಾಹ್ಮಣ ವಟುವಿಗೆ ಕಾಶಿಯಲ್ಲಿ ಸನ್ಯಾಸ ದೀಕ್ಷೆ ನೀಡಿ ಶ್ರೀ ಯಾದವೇಂದ್ರ ತೀರ್ಥ ಎಂಬ ನಾಮಭಿದಾನ ನೀಡಿದರು. ಅದೇ ಶ್ರೀ ಕಾಶೀಮಠವು. ಈಗ ಶ್ರೀ ಕಾಶೀಮಠ ಸಂಸ್ಥಾನದ ಪರಮಾಚಾರ್ಯರು ಶ್ರೀಮತ್‌ಸುಧೀಂದ್ರ ತೀರ್ಥ ಸ್ವಾಮಿಗಳು. ಈ ಮಹಾನ ತಪಸ್ವಿ ತೇಜಸ್ವಿಗಳಾದ ಇವರು ಬದರಿ, ಹರಿದ್ವಾರ ,ಕಲ್ಪಿ ಅಂಥ ಪ್ರಾಚೀನ ಪವಿತ್ರ ಪ್ರದೇಶಗಳಲ್ಲಿ ರಾಷ್ಟ್ರದಲ್ಲಿಯೇ ಪ್ರಪ್ರಥಮವಾಗಿ ಶ್ರೀ ವೇದವ್ಯಾಸ ಮಂದಿರವನ್ನು ನಿರ್ಮಿಸಿ ಸಾಧಕರ ಸಲುವಾಗಿ ಬದರಿ, ಕಲ್ಪಿ (ಶ್ರೀ ವೇದವ್ಯಾಸರ ಜನ್ಮಸ್ಥಳ )ಗಳಲ್ಲಿ ಮಹಾನ ಮಠಗಳನ್ನು ನಿರ್ಮಿಸಿದ ಮಹಾನ ಯುಗ ಪುರುಷರು. ದಾಕ್ಷಿಣಾತ್ಯ ಸಾರಸ್ವತ ಬ್ರಾಹ್ಮಣರ ಪಾರಮಾರ್ಥಿಕರ ಪ್ರಾಣಶಕ್ತಿ. ಆಸೇತು ಹಿಮಾಚಲ ಸತತವಾಗಿ ಸಂಚರಿಸಿ ಈ ಪರಿವ್ರಾಜಕರು ಅಂಸಖ್ಯ ದೇವಾಲಯ ಮಠ ಮಂದಿರಗಳನ್ನು ನಿರ್ಮಿಸಿದ ರಾಷ್ಟ್ರೋದ್ಧಾರಕರು.

## ಶ್ರೀಶ್ರೀ ಚಿತ್ರಾಪುರ ಮಠ



ಶ್ರೀ ಚಿತ್ರಾಪುರಮಠವು ಸಾರಸ್ವತ ಪರಂಪರೆಯ ಶೈವ ಸಂಪ್ರದಾಯದ ಮಠಗಳಲ್ಲಿ ಒಂದು. ಅದ್ವೈತ ಸಂಪ್ರದಾಯದ ಈ ಮಠದ ಆರಾಧ್ಯದೈವ ಶ್ರೀ ಭವಾನಿಶಂಕರ. ಗೋಕರ್ಣ ಮಹಾಕ್ಷೇತ್ರದಲ್ಲಿ ಶ್ರೀ ಮಹಾಬಲೇಶ್ವರನ ಪ್ರೇರಣೆಯಿಂದ ಪ್ರಥಮ ಸ್ವಾಮಿಗಳಾದ ವರೇ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳು. ಮಹಾನ ತಪಸ್ವಿಗಳು ಶಾಂತಮೂರ್ತಿಗಳು ಆದ ಶ್ರೀ ಪಾಂಡುರಂಗಾಶ್ರಮ ಸ್ವಾಮೀಜಿಯವರ ಕಾಲದಲ್ಲಿ ಈಮಠದ ಖ್ಯಾತಿಯು ಉತ್ತುಂಗಕ್ಕೇರಿತು. ಈ ದಿವ್ಯ ಪೀಠದಲ್ಲಿ ಈಗ ವಿರಾಜಮಾನರಾಗಿರುವ ಶ್ರೀ ಶ್ರೀ ಸದ್ಯೋಜಾತ ಶಂಕರಾಶ್ರಮ ಸ್ವಾಮಿಗಳು, ತಪಸ್ವಿ, ತತ್ವಜ್ಞಾನಿ, ಅದರಂತೆ ಪರಮ ಶಾಂತಮೂರ್ತಿ ಪ್ರೇಮಳ ವಿಭೂತಿಪುರುಷ.

## ಸಾರಸ್ವತ ಬ್ರಾಹ್ಮಣರು ಮತ್ತು ಷೋಡಶ ಸಂಸ್ಕಾರ

ಸರ್ವ ಸಂಸ್ಕಾರಗಳು ವ್ಯಕ್ತಿಯ ಮನದ ಮೇಲೆ ಪರಿಣಾಮವನ್ನು ಬೀರುತ್ತವೆ. ವ್ಯಕ್ತಿ ಧ್ಯೇಯವಾದಿಯಾಗಬೇಕು ಎನ್ನುವದು ಅದರ ಉದ್ದೇಶ. ಅಂಥಹ ಹದಿನಾರು ಸಂಸ್ಕಾರಗಳ ಆದಿಗ್ರಂಥಗಳೆಂದರೆ ಅಶ್ವಾಲಾಯನ ಗ್ರಹಸೊತ್ರ .ಅದರ ಪ್ರಯೋಗ ಗ್ರಂಥ ನಾರಾಯಣಿ ಭಟ್ಟೀಯ ಸಂಸ್ಕಾರ ಕೌಸ್ತುಭ ಮತ್ತು ಸಂಸ್ಕಾರ ರತ್ನಮಾಲಾ ಇವು ಮೂರು ವಿಧಿದರ್ಶಕ ಪ್ರಯೋಗ ಗ್ರಂಥಗಳು.

ಗರ್ಭಾದಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೌಲಕರ್ಮ, ಉಪನಯನ, ಮೇಧಾಜನನ, ಮಹಾನಾಮ್ನಿ , ಮಹಾವ್ರತ, ಉಪನಿಷದ್‌ವ್ರತ, ಸಮೂವರ್ತನ, ವಿವಾಹ, ಅಂತ್ಯೇಷ್ಟ ಇವೇ ಹದಿನಾರು ಸಂಸ್ಕಾರಗಳು. ಇವೇಲ್ಲವುಗಳನ್ನು ಸಾರಸ್ವತರು

ಕಾಲಾನುಗುಣವಾಗಿ ನಡೆಸುತ್ತಾರೆ. ಶ್ರಾದ್ಧಾಧಿ ಪರ್ವಕಾಲಗಳಲ್ಲಿ ಪಿತ್ರತರ್ಪಣೆ,ಉಪಾಕರ್ಮ ಇತ್ಯಾದಿಗಳನ್ನು ಶ್ರದ್ಧೆಯಿಂದ ಪುರೋಹಿತದ್ವಾರಾ ಮಾಡುತ್ತಾರೆ. ಅವುಗಳಲ್ಲಿ ಚೌಲ , ಉಪನಯನ , ವಿವಾಹಾದಿ ಸಂಸ್ಕಾರಗಳು ವಿಧಿವತ್ತಾಗಿ ಮತ್ತು ವೈಭವ ಪೂರ್ಣವಾಗಿರುತ್ತದೆ.

**ಮಮವೃತೇ ಹೃದಯಂ ತೇ ದಧಾಮಿ, ಮಮಚಿತ್ತಂ ಮನುಚಿತ್ತಂ ತೇ ಅಸ್ತ** ಎಂಬ ಋಗ್ವೇದದ ಮಂತ್ರದಿಂದ ಪಿತನು ಶ್ರದ್ಧೆಯಿಂದ ಪುತ್ರನಿಗೆ ಗಾಯತ್ರಿ ಮಂತ್ರವನ್ನು ಉಪದೇಶಿಸುತ್ತಾನೆ. ವಿವಾಹ ಪೂರ್ವದಲ್ಲಿ ವಧುವರರನ್ನು ಎದುರಿಗೆ ಕುಳ್ಳಿರಿಸಿ , ಸಮಾಜದ ಪ್ರಮುಖರ ಸಮ್ಮುಖದಲ್ಲಿ ಪುರೋಹಿತದ್ವಾರಾ ಮಮ ಕನ್ಯೆ - ಅವ್ಯಂಗೇ - ಅಪತಿತೆ - ದಶದೋಷ ವಿಸರ್ಜಿತೆ ಅರ್ಥಾತ ನನ್ನ ಕನ್ಯೆ ಅಂಗವಿಕಲಳಲ್ಲ. ಶೀಲಬ್ರಷ್ಟಳಲ್ಲ, ಇವಳಲ್ಲಿ ಯಾವುದೇ ದೋಷಗಳಿಲ್ಲ ಎಂದು ಹೇಳುತ್ತಾನೆ. ಆಗ ವರನ ಕಡೆಯವರು **ಧರ್ಮಪ್ರಜಾಸಿದ್ಧ್ಯರ್ಥ** ನಾವು ನಿಮ್ಮ ಕನ್ಯೆಯನ್ನು ಸ್ವೀಕಾರ ಮಾಡುತ್ತೇವೆ ಎಂದು ಉಭಯತ್ರರು ಪ್ರತಿಜ್ಞಾಭದ್ದರಾಗುತ್ತಾರೆ. ತದನಂತರರದಲ್ಲಿ ಬ್ರಾಹ್ಮಿ ವಿವಾಹ ಪದ್ಧತಿ ಪ್ರಕಾರ , ಕುಲ ಗೋತ್ರ, ಸೂತ್ರ ವಿಚಾರ ಮಾಡಿ ಸಾಲಂಕೃತ ಕನ್ಯಾದಾನ , ಪಾಣಿಗ್ರಹಣ ವಿವಾಹಹೋಮ , ಅಶ್ವಾರೋಹಣ , ಸಪ್ತಪದಿ , ಅರುಂಧತಿದರ್ಶನ ಇವೆಲ್ಲ ಸರ್ವ ನಿಯಮಗಳು ಸಾರಸ್ವತರಲ್ಲಿ ಒಂದೇ ತರನಾಗಿರುತ್ತವೆ.

ದೇವಾಲಯ ಮತ್ತು ಸಾಂಸ್ಕೃತಿಕ ಪರಂಪರೆಯ ಪೂರ್ವದಲ್ಲಿ ಅವಿಭಕ್ತ ಕುಟುಂಬಗಳಿರುತ್ತಿದ್ದು ಮನೆಯಲ್ಲಿ ದೇವರ ಸ್ಥಳ ಕಲ್ಪನೆಯನ್ನು ಮಾಡಲು ಪ್ರತ್ಯೇಕವಾದ ದೇವರ ಕೋಣೆಗಳಿರುತ್ತಿದ್ದವು. ಕುಟುಂಬವು ಬೆಳೆದಂತೆ ಸ್ಥಳದ ಅಭಾವ , ಸೂತಕ ಮೃತಕ ಇವೆಲ್ಲ ಕಾರಣಗಳಿಂದ ಉಪಾಸನೆ ಗೋಸ್ಕರ ಪ್ರತ್ಯೇಕ ದೇವಾಲಯಗಳನ್ನು ಕಟ್ಟಿದರು. ಕುಟುಂಬದ ಸದಸ್ಯರೆಲ್ಲ ಪ್ರತಿದಿನ ದೇವಾಲಯಕ್ಕೆ ಬಂದು ಪ್ರಾರ್ಥನೆ ಪೂಜೆಗಳನ್ನು ಮಾಡುತ್ತಿದ್ದರು. ದೇವರಿಗೆ ನೈವೇದ್ಯವಾದ ನಂತರವೇ ಮನೆಯಲ್ಲಿ ಭೋಜನವನ್ನು ಮಾಡುತ್ತಿದ್ದರು. ಇದರಿಂದಾಗಿ ಆ ದೇವಾಲಯಗಳನ್ನು ಕುಲದೇವಸ್ಥಾನವೆಂದು ಕರೆಯುತ್ತಾರೆ. ಉಪಾಸನೆಯ ಪದ್ಧತಿಯಲ್ಲಿ ವ್ಯತ್ಯಾಸಗಳಾಗಬಹುದು. ಇಷ್ಟದೈವ, ಕುಲದೈವ ಗ್ರಾಮದೈವ ಇತ್ಯಾದಿಗಳನ್ನು ಪೂಜಿಸುವ ಪದ್ಧತಿ ಬೆಳೆಯಿತು.

ಪ್ರಾಚೀನ ಗೌಡ ಸಾರಸ್ವತ ಸಮಾಜದಲ್ಲಿ ಗೋಮಾಂತಕದಲ್ಲಿ ಗ್ರಾಮಸಂಸ್ಥೆ ಎಂಬುದು ಪ್ರಚಲಿತವಿತ್ತು. ಅದರ ಪ್ರಧಾನರು ಗಾಂವಕಾರರು. ಸಮಾಜದ ಸುಖದುಃಖ , ಒಳ್ಳೆಯದು ಕೆಟ್ಟದ್ದು, ವಿಧಿ ನಿಷೇಧ ಇವುಗಳಲ್ಲಿ ಏನಾದರೂ ವ್ಯತ್ಯಾಸವಾದಲ್ಲಿ ಅದರ ಉಸ್ತುವಾರಿಯನ್ನು ಗ್ರಾಮಸಂಸ್ಥೆಯು ನೋಡಿಕೊಳ್ಳುತ್ತಿತ್ತು. ಸಮಾಜದ ಆರ್ಥಿಕ , ಶೈಕ್ಷಣಿಕ, ಆರೋಗ್ಯ , ವಿವಾಹ , ಅಂತ್ಯೇಷ್ಟಿ ಇವುಗಳ ಜವಾಬ್ದಾರಿ ಗ್ರಾಮಸಂಸ್ಥೆಗಿತ್ತು. ದೇವಾಲಯಗಳಲ್ಲಿ ಪಂಚಪರ್ವ , ಭಜನ, ಕೀರ್ತನ ಆದರಂತೆ ದೇವಾಲಯಕ್ಕೆ ಬರುವಾಗ ಪ್ರತ್ಯೇಕವಾದ ಉಡುಪಿನ ಪದ್ಧತಿ ಇತ್ತು. ದೇವಾಲಯದಲ್ಲಿ ದೇವತಾ ಪ್ರಸಾದ ಭೋಜನ ಇರುತ್ತಿತ್ತು. ಅಲ್ಲಿ ಪಾಕಶಾಲೆ , ಪಾಠಶಾಲೆ , ಯಾಗಶಾಲೆ , ಹೀಗೆ ಐಹಿಕ ಪಾರತ್ರಿಕ ಸತ್ಕಾರ್ಯಗಳ ಸಲುವಾಗಿ ಪ್ರತ್ಯೇಕವಾದ ವ್ಯವಸ್ಥೆ ಇತ್ತು. ಹದಿನೈದು ಮತ್ತು ಹದಿನಾರನೇ ಶತಮಾನದಲ್ಲಿ ಗೋಮಾಂತಕದಲ್ಲಿ ಪೋರ್ತುಗೀಸರ ಭಯಾನಕ ಹಿಂಸಾಕಾಂಡದಿಂದ ಯಾವಾಗ ಮತಾಂತರವಾಯಿತೋ ಆಗ ಅಸಂಖ್ಯಾತ ಸಾರಸ್ವತರು ಧರ್ಮ , ಸಂಸ್ಕೃತಿ ಮತ್ತು ಪ್ರಾಣ ರಕ್ಷಣೆಗಾಗಿ ತಮ್ಮ ಭೂಮಿ ಹೊಲ ಗದ್ದೆ ಮನೆ ಊರನ್ನು ಬಿಟ್ಟು ಕರ್ನಾಟಕ ಮಹಾರಾಷ್ಟ್ರ ಕೊಂಕಣಘಟ್ಟ ಕೇರಳ ಮತ್ತು ಪಶ್ಚಿಮ ಘಟ್ಟಗಳ ಮೇಲೆ ಆಶ್ರಯ ಪಡೆದರು. ಮತ್ತು ಬೇರೆ ಬೇರೆ ಯಾಗಿ ಹಂಚಿ ಹೋದರು.

ಸಮಾಜದ ಐಕ್ಯತೆ ,ಶಾಂತತೆ, ಸಂಸ್ಕಾರ ಇವೆಲ್ಲ ನಷ್ಟವಾದವು. ಆದಾಗ್ಯೂ ಈ ದಾರುಣ ಸ್ಥಿತಿಯಲ್ಲಿಯೂಕೂಡ ಸಾರಸ್ವತ ಬ್ರಾಹ್ಮಣರು ದೈವ ಧರ್ಮಗಳನ್ನು ಉಳಿಸಿ ಬೆಳೆಸಿದುದು ಒಂದು ವಿಶೇಷ. ಹೀಗೆ ದೇಶ ಭ್ರಷ್ಟರಾದ ಅವರು ಅನೇಕ ಕಾಲ ಕಾಡಿನಲ್ಲಿ , ವನಗಳಲ್ಲಿ ಕಳೆಯಬೇಕಾಯಿತು. ಆಗ ಅನೇಕ ವನಸ್ಪತಿ, ಗಿಡಮೂಲಿಕೆಗಳು ಅವರ ಆಹಾರವಾದವು. ಇಂದು ನಾವು ರುಚಿಕರವೆಂದು ತಿನ್ನುವ ಕಳಲೆ ಪತ್ರಡೆ, ತಾಯ್ಕಿಳೆ, ಗೊಂಯ್ಬು, ಫಾಫಿಳ, ಸುವರ್ಣಗಡ್ಡೆ, ಆಳಂಬೆ, ಪೆಂಡಾರೊ, ಕತ್ರೆಕಾಂದೊ, ಹೀಗೆ ನಾನಾ ಜಾತಿಯ ಎಲೆ, ಗಡ್ಡೆ ಗೆಣಸು ಇವುಗಳೆಲ್ಲವನ್ನು ಆಪತ್ಕಾಲದಲ್ಲಿ ವಿಧಿ ನಿಷೇಧವಿಲ್ಲದೆ ಅವರು ತಿನ್ನಬೇಕಾಯಿತು.

ಸಾರಸ್ವತ ಸಮಾಜವು ಒಂದು ಸ್ವಯಂಭೂ ಸಮಾಜ. ಅನೇಕ ರೂಪಗಳಿದ್ದರೂ ದೇವರು ಮತ್ತು ಧರ್ಮಪೀಠಗಳಿಂದಾಗಿ ಸಮಾಜದಲ್ಲಿ ಏಕತೆ ಇದೆ. ಇಂದು ನಮ್ಮ ಗೌಡ ಸಾರಸ್ವತ ಸಮಾಜವು ವಿಶ್ವವ್ಯಾಪಿಯಾಗಿದೆ. ವೈಜ್ಞಾನಿಕ , ವೈಚಾರಿಕ ಸೈದ್ಧಾಂತಿಕ ಕ್ರಾಂತಿಯು ಸಮಾಜದಲ್ಲಿ ಉಂಟಾಗಿದೆ. ವಾಣಿಜ್ಯ ವ್ಯಾಪಾರ ಆರ್ಥಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ನಾವು ಅಗ್ರ ಶ್ರೇಣಿಯಲ್ಲಿದ್ದೇವೆ. ಇದು ನಮ್ಮ ಪೂರ್ವಜರ ಪುಣ್ಯ ಮತ್ತು ನಮ್ಮ ಕುಲದೇವರ ಹಾಗೂ ಧರ್ಮಾಚಾರ್ಯರ ಆಶೀರ್ವಾದ.

ವಿಜ್ಞಾನ ಮತ್ತು ವೇದಾಂತ ಬೇರೆ ಬೇರೆಯಲ್ಲ. ಎಲ್ಲಿ ವಿಜ್ಞಾನವು ವಿಸ್ಖಲಿತವಾಗುತ್ತದೆಯೋ ಅಲ್ಲಿ ವೇದಾಂತ ಪ್ರಾರಂಭವಾಗುತ್ತದೆ. ವೇದಾಂತವಿಲ್ಲದ ವಿಜ್ಞಾನವು ಕುರುಡು. ಅದೇ ರೀತಿ ವಿಜ್ಞಾನವಿಲ್ಲದ ವೇದಾಂತವೂ ಕೂಡ. ಇವೆರಡೂ ಸಮಾನಾಂತರವಾಗಿ ಬೆಳೆದಲ್ಲಿ ಮಾತ್ರ ಐಹಿಕ ಪಾರಮಾರ್ಥಿಕ ಉನ್ನತಿ ಸಾಧ್ಯ. ಇದು ನಮ್ಮ ಗುರಿಯಾಗಿರಬೇಕು.

**॥ ಓಂ ಶಾಂತಿ ಶಾಂತಿ ಶಾಂತಿಃ ॥**

**ಸಾರಸ್ವತ ಮಠಗಳಲ್ಲೇ ಶ್ರೀ ಗೌಡ ಪಾದಾಚಾರ್ಯ ಮಠ ಅತೀ ಪ್ರಾಚೀನವಾದುದು. ಪೋರ್ಚಗೀಸರು ಹಿಂದೂ ದೇವಾಲಯಗಳ ವಿರುದ್ಧ ಯುದ್ಧ ಸಾರಿ ದೇವಾಲಯಗಳನ್ನು ನಾಶ ಮಾಡುತ್ತಾ ಗೌಡ ಪಾದಚಾರ್ಯ ಮಠವನ್ನು ಸುಡಲೂ ಬಂದಿದ್ದರು. ಮಠದ ದಸ್ತಾವೇಜು ಸುಟ್ಟು ಹೋದುದರಿಂದ 56ರ ವರೆಗಿನ ಸ್ವಾಮೀಜಿಯವರ ಹೆಸರಗಳು ಲಭ್ಯವಿಲ್ಲ.**

# ನಮ್ಮ ಸಮಾಜದಲ್ಲಿ ದೇವಾಲಯ ಮತ್ತು ಗುರುಪೀಠದ ಮಹತ್ವ

"ಋಷಯೋ ವೈ ಸರಸ್ವತ್ಯಾಂ ಸತ್ರ ಮಾಸತ" ಋಷಿಗಳು ಸರಸ್ವತಿ ನದಿ ತೀರದಲ್ಲಿ ಸತ್ರವನ್ನು ಜರುಗಿಸಿದರು. ಈ ಶ್ರುತಿಯು ಐತರೇಯ ಬ್ರಾಹ್ಮಣದಲ್ಲಿ ಬರುತ್ತದೆ. ಅಶ್ವಲಾಯನ ಶ್ರೌತ ಸೂತ್ರಗಳಲ್ಲಿ ಈ ಯಾಜ್ಞಿಕರಿಗೆ ಸಾರಸ್ವತರೆಂದರು. ಈ ಋಷಿಗಳ ವಂಶಸ್ಥರೂ ಸಾರಸ್ವತರಾದರು. ಅನೇಕ ವರ್ಷಗಳ ಭೀಕರ ಕ್ಷಾಮದ ಫಲವಾಗಿ ಸರಸ್ವತಿ ನದಿ ತೀರದಿಂದ ವಲಸೆ ಹೋದ ಈ ಸಾರಸ್ವತ ಕುಟುಂಬಗಳಲ್ಲಿ ಕೆಲವರು ಬಂಗಾಲ ದೇಶ (ಗೌಡದೇಶ) ದಲ್ಲಿ ವಾಸಿಸಿದರು. ಅಂತೆಯೇ ಇವರು ಗೌಡ ಸಾರಸ್ವತರಾದರು.

ಪರಮಾತ್ಮನು ಪ್ರೇಮ ಸ್ವರೂಪನೂ, ಕರುಣಾನಿಧಿಯೂ, ಭಕ್ತ ಪರಾಧೀನನೂ ಆಗಿದ್ದಾನೆ. ಆತನು ನಮಗೆ ಪ್ರಭುವು, ಪ್ರಭುವನ್ನು ಸೇವಿಸುವುದು ನಮ್ಮ ಮುಖ್ಯ ಕರ್ತವ್ಯ. ಆದರೆ ಆತನನ್ನು ಕಾಣುವುದು ಹೇಗೆ? ಪರಮಾತ್ಮ ನಿರಾಕಾರನಾದರೂ ಸಾಕಾರನಾಗಿದ್ದಾನೆ. ಆತನು ಸಗುಣನೂ ಹೌದು ನಿರ್ಗುಣನೂ ಹೌದು. ನಿರ್ಲಿಪ್ತನಾದರೂ ಪ್ರಕೃತಿಯೊಡನೆ ಸೇರಿಕೊಂಡಿದ್ದಾನೆ. ಹಾಲಿನಲ್ಲಿ ತುಪ್ಪವು ಅಡಗಿರುವಂತೆ, ನೀರಿನಲ್ಲಿ ವಿದ್ಯುತ್ ಅಂಶ ಸಮ್ಮಿಳಿತವಾಗಿದ್ದಂತೆ ಪ್ರಕೃತಿಯ ಕಣಕಣಗಳಲ್ಲೂ ಭಗವಂತನಿದ್ದಾನೆ. ಆದರೂ ಆತ ನಮ್ಮ ಭೌತಿಕ ಕಣ್ಣುಗಳಿಗೆ ಗೋಚರಿಸಲಾರ. ಆ ದಿವ್ಯ ತೇಜೋಮೂರ್ತಿಯನ್ನು ಪ್ರತ್ಯಕ್ಷ ಕಾಣುವ ಶಕ್ತಿಯು ನಮ್ಮ ಕಣ್ಣುಗಳಿಗೆ ಇಲ್ಲ. ಈ ಕುರಿತು ಸಾಕಷ್ಟು ವಿಮರ್ಶೆ ಮಾಡಿದ ನಂತರ ಮಹರ್ಷಿಗಳು ದೇವಪೂಜಾ ಮಾರ್ಗವನ್ನು ಕಂಡುಕೊಂಡರು. ಈ ಉಪಾಸನೆಗಾಗಿ ಶಾಸ್ತ್ರೀಯ ವಿಧಿನಿಯಮಗಳಿಂದ ರಚಿಸಿದ ಮೂರ್ತಿಯ ಅವ್ಯಶಕತೆ ಕಂಡುಬಂದಿತು . ಕ್ರಮಬದ್ಧವಾದ ವೈದಿಕ ಮಂತ್ರ, ತಂತ್ರ , ವಿಧಿವಿಧಾನಗಳಿಂದ ಮೂರ್ತಿಗೆ ಅವ್ಯಾಹತವಾಗಿ ನಿತ್ಯ ನೈಮಿತ್ತಿಕ ಪೂಜಾ ಕಾರ್ಯಗಳು ನಡೆಯುತ್ತಿರಬೇಕು ಎಂಬ ಒಮ್ಮತದ ಸಿದ್ಧಾಂತ ರಚಿತವಾಯಿತು.

ಚಂಚಲವಾದ ಮನಸ್ಸನ್ನು ಬಿಗಿ ಹಿಡಿಯುವುದು ಕಷ್ಟ. ಕಣ್ಣೆದುರು ಗೋಚರಿಸುವ ಸುಂದರ ಮೂರ್ತಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದು ಸುಲಭ, ಈ ಧ್ಯೇಯೋದ್ದೇಶದಿಂದ ಪ್ರಾಚೀನರು ದೇವಾಲಯಗಳನ್ನು ನಿರ್ಮಿಸಿ ವಿಧಿ ಪೂರ್ವಕವಾಗಿ ಅಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿ ಲೋಕಾಭ್ಯುದಯಕ್ಕಾಗಿ ನಿತ್ಯ ನಿಯಮಿತ ಪೂಜಾ ವಿಧಾನಗಳನ್ನು ನಿರೂಪಿಸಿದರು. ವಿಶ್ವಾಸಃ ಫಲದಾಯಕಃ ಎಂಬ ಆರ್ಯೋಕ್ತಿಗೆ ಅನುಗುಣವಾಗಿರುವ ಈ ಪದ್ಧತಿಯನ್ನು ಪುರಾಣಗಳಲ್ಲಿ ಉಲ್ಲೇಖಿಸಿದ್ದಾರೆ.

ನಮ್ಮ ಸಮಾಜದಲ್ಲಿ ಶುದ್ಧ ನಾಸ್ತಿಕರು ಇಲ್ಲವೇ ಇಲ್ಲ ಎಂದರೆ ತಪ್ಪಾಗಲಿಕ್ಕಿಲ್ಲ. ಇದ್ದರೂ ಬೆರಳೆಣಿಕೆಯಷ್ಟು. ಸರ್ವರೂ ಲೋಕಾತೀತವಾದ ದೈವೀಶಕ್ತಿಯನ್ನು ಒಪ್ಪಿದ್ದಾರೆ. ನಮ್ಮ ಸಮಾಜದ ಹಿರಿಯರು ಭಗವಂತನ ಸಗುಣ ಸ್ವರೂಪವನ್ನು ವಿಗ್ರಹಗಳಲ್ಲಿ ಕಂಡುಕೊಂಡು ಈ ವಿಗ್ರಹಗಳನ್ನು ಒಂದೆಡೆ ಇರಿಸಿ ತಮ್ಮ ಮನೋಭಾವಕ್ಕೆ ತಕ್ಕಂತೆ ಆರಾಧಿಸಲು ದೇವಾಲಯಗಳು ನಿರ್ಮಾಣವಾದವು. ಆಗಮೋಕ್ತವಾಗಿ ದೇವಾಲಯ ರಚನೆಗೊಂಡು ವಿಗ್ರಹಾರಾಧನೆ ಆಧ್ಯಾತ್ಮದ ಒಂದು ಅಂಗವಾಗಿ ನೆಲೆನಿಂತ ನಂತರ ಕಾಲವು ಗತಿಸಿದಂತೆ ದೇವಾಲಯಗಳ ಉಪಯೋಗ ಬಹುವಿಧವಾಗಿ ನಮ್ಮವರ ದಿನನಿತ್ಯದ ಜೀವನದಲ್ಲಿ ಹಾಸುಹೊಕ್ಕಾಯಿತು. ದೇವಾಲಯ ಕಟ್ಟಿಸುವುದು ಪುಣ್ಯಕಾರ್ಯ ಜೊತೆಗೆ ಅವುಗಳ ನಿರ್ವಹಣೆಗೆ ಧನ-ಕನಕ ಸಾಮಗ್ರಿಗಳನ್ನು ಪೂರೈಸುವುದು ಪರಮಶ್ರೇಷ್ಠ ಕಾರ್ಯ ಎಂಬ ಸಾಮಾಜಿಕ ಪ್ರಜ್ಞೆ ಬೆಳೆದು ದೇವಾಲಯ ಸಂಘಟನೆಯ ಕೇಂದ್ರವಾಯಿತು. ಅವು ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳಾದವು. ಸಮಾಜದ ಸುವ್ಯವಸ್ಥೆಯ ದ್ಯೋತಕವಾಯಿತು. ನಮ್ಮ ಸಮಾಜದ ಈ ದೇವಾಲಯಗಳು ಕ್ರಮೇಣ ಉಪಾಧ್ಯಾಯ ವಿದ್ಯಾರ್ಥಿ ಒಟ್ಟಾಗಿ ಇರುವ ವಿದ್ಯಾಕೇಂದ್ರಗಳಾದವು. ಕೆಲವೊಮ್ಮೆ ಸಮಾಜದ ನ್ಯಾಯ

ತೀರ್ಮಾನಕ್ಕಾಗಿ ಹತ್ತು ಸಮಸ್ತರು ಸೇರುವ ಧಾ ಜನ (ಹತ್ತು ಸಮಸ್ತರ) ಮಠ ಆಗಿ ಖ್ಯಾತಿಗೊಂಡವು. ದೇವರ ಸನ್ನಿಧಿಯಲ್ಲಿ ಸುಳ್ಳು ಹೇಳಕೂಡದು. ಈ ಭಯದಿಂದ ಸಾಕ್ಷಿಗಳು ನಿಜವನ್ನೇ ಹೇಳುತ್ತಿದ್ದುದರಿಂದ ದೇವಾಲಯಗಳು ನ್ಯಾಯ ತೀರ್ಮಾನದ ಕೇಂದ್ರಗಳಾದವು. ನಮ್ಮಲ್ಲಿ ಜನ ಸಾಮಾನ್ಯರ ಪಾಲಿಗೆ ಇವು ಭಯ ಹೋಗಲಾಡಿಸುವ ಕೇಂದ್ರಗಳಾಗಿವೆ. ಕಷ್ಟ ಬಂದಾಗ ಮೊರೆ ಹೋಗುವ ತಾಣಗಳಾಗಿವೆ. ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಧಾರ್ಮಿಕ ವ್ಯವಸ್ಥೆಗಳ ಆಗರಗಳಾಗಿವೆ. ನಮ್ಮಲ್ಲಿ ಧಾರ್ಮಿಕ ಪ್ರಜ್ಞೆ ಉಂಟು ಮಾಡುವ ಸ್ಥಳಗಳಾಗಿವೆ. ಅಂತೆಯೇ ಜನನದಿಂದ ಮರಣದವರೆಗೂ ದೇವಾಲಯಗಳು ನಮ್ಮ ಬದುಕಿನ ಅವಿಭಾಜ್ಯ ಅಂಗಗಳಾಗಿವೆ.

ಬಂಗಾಲ ಪ್ರದೇಶದಲ್ಲಿ ನಮ್ಮ ಸಾರಸ್ವತ ಸಮಾಜದವರು ವಾಸಿಸುತ್ತಿದ್ದಾಗ ದುರ್ಗಾದೇವಿಯ ಉಪಾಸಕರಾಗಿದ್ದರು. ಗೌಡ ದೇಶದಿಂದ ಗೋಮಾಂತಕ ಪ್ರದೇಶದಲ್ಲಿ ನೆಲೆಸಲು ಹೊರಟುಬಂದ ನಮ್ಮ ಸಮಾಜದ ವಿವಿಧ ಗುಂಪುಗಳಲ್ಲಿನ ಪ್ರತಿಯೊಂದು ಗುಂಪು ತಮ್ಮ ಉಪಾಸನೆಯ ದೇವ ಮೂರ್ತಿಗಳನ್ನು ತಮ್ಮ ಸಂಗಡ ತಂದು ಅವಗಳನ್ನು ತಾವು ಆಶ್ರಯಿಸಿದ ಗೋವೆಯ ಪ್ರದೇಶಗಳಲ್ಲಿ ಪ್ರತಿಷ್ಠಾಪಿಸಿ ತಮ್ಮ ಮನೆತನದ ಉಪಾಸನೆಯ ದೇವತೆಗಳೆಂಬುದಾಗಿ ಪೂಜಿಸಿ ತಮ್ಮ ಮನೆತನದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬಂದರು. ಈ ದೇವಾಲಯಗಳೇ ಮುಂದೆ ಕುಲದೇವಸ್ಥಾನಗಳಾಗಿ ಪ್ರಖ್ಯಾತ ಗೊಂಡವು . ಇಂತಹ ಕುಲದೇವಸ್ಥಾನಗಳು ಗೌಡಸಾರಸ್ವತ ಸಮಾಜದವರಲ್ಲಿಯ ವಿಶೇಷತೆಗಳಲ್ಲಿ ಒಂದಾಗಿವೆ.

ಈ ಎಲ್ಲ ದೇವಾಲಯಗಳಲ್ಲಿ ಪೂಜಾ ವಿಧಾನಗಳು ಸಾಮಾನ್ಯವಾಗಿ ಏಕರೀತಿಯದಾಗಿವೆ. ಮುಂಜಾನೆ 8-00 ಘಂಟೆಯೊಳಗಾಗಿ ನೈರ್ಮಾಲ್ಯ ವಿಸರ್ಜನಾ ಪೂಜೆ ಜರುಗುತ್ತದೆ. ನಮ್ಮಲ್ಲಿ ಮಧ್ಯಾಹ್ನ ಪೂಜೆಯ ಬಳಿಕ ವೈದಿಕರು ಭೋಜನ ಮಾಡಿದ ನಂತರ ಮತ್ತೆ ದೇವ ಪ್ರತಿಮೆಯನ್ನು ಮುಟ್ಟವಂತಿಲ್ಲ. ಹಾಗಾಗಿ ಪ್ರತಿನಿತ್ಯ ಮುಂಜಾನೆ ಮೊದಲ ದಿನದ ಅಲಂಕಾರ ವಿಸರ್ಜಿಸಿ ಅಭಿಷೇಕಕ್ಕಾಗಿ ಮೂರ್ತಿಯನ್ನು ಅಣಿಗೊಳಿಸಿ ಇಡುವ ಪ್ರಕ್ರಿಯೆಯೇ ನಿರ್ಮಾಲ್ಯ ವಿಸರ್ಜನೆ. ಮಧ್ಯಾಹ್ನದ ಅಭಿಷೇಕ, ಅರ್ಚನೆ ಮುಗಿಸಿ ಅಲಂಕಾರದ ನಂತರ ನೈವೇದ್ಯ ಸಮರ್ಪಿಸಿ ಷೋಡಷೋಪಚಾರ ಪೂಜೆಯೊಂದಿಗೆ ಮಹಾಪೂಜೆಯ ನಂತರ ರಾತ್ರಿಪೂಜೆ ಜರುಗುತ್ತವೆ. ವಿಶೇಷ ಪರ್ವಕಾಲಗಳಲ್ಲಿ ವಿಶೇಷ ಪೂಜಾವಿಧಿಗಳು ಜರುಗುತ್ತವೆ. ಪುಷ್ಪಾಲಂಕಾರ, ನಂದಾದೀಪ ಇವು ನಮ್ಮ ಸಮಾಜದ ದೇವಾಲಯಗಳಲ್ಲಿ ಪ್ರಾಧಾನ್ಯತೆ ಹೊಂದಿದ್ದು ದೇವಾಲಯದ ಉತ್ಕರ್ಷ ಮಾಡುವದಾದರೆ ಜಿ. ಎಸ್. ಬಿ. ಸಮಾಜದವರನ್ನು ಅನುಕರಣೆ ಮಾಡಿ ಎಂದು ಅನ್ಯ ಸಮಾಜದವರು ಹೇಳುವುದು ಕಟು ಸತ್ಯ.

ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಸುಧಾರಣೆಗಳಲ್ಲಿ ಪರಾಕಾಷ್ಠೆಯ ಉತ್ತಮೋತ್ತಮ ಕಾರ್ಯಗಳನ್ನು ಮಾಡಲು,ಘನ ವಿದ್ವಾಂಸರಿಗೆ ಗೌರವ ನೀಡಲು ಮತ್ತು ಶಿಷ್ಯ ವೃಂದದವರನ್ನೆಲ್ಲ ಒಂದೆಡೆ ಸೇರಿಸಿ ವಿವಿಧತೆಯಲ್ಲಿ ಏಕತೆ ಸ್ಥಾಪಿಸಲು ಧರ್ಮಪೀಠ ಮತ್ತು ಗುರುಪೀಠಗಳು ಅವಶ್ಯವಾದವು. ಲೌಕಿಕ ಮತ್ತುಪಾರಮಾರ್ಥಿಕ ತತ್ವಗಳನ್ನು ಜನಸಾಮಾನ್ಯರಿಗೆ ಪ್ರಚಾರಮಾಡಿ ಲೋಕ ಕಲ್ಯಾಣ ಬಯಸುವುದೇ ಗುರುಪೀಠದ ಪರಮೋಚ್ಚ ಲಕ್ಷ್ಯ. ಈ ಪ್ರಪಂಚದಲ್ಲಿ ನರಜನ್ಮಕ್ಕೆ ಬಂದ ಪ್ರತಿಯೊಬ್ಬನೂ ಗುರುವಿನ ಅನುಗ್ರಹಕ್ಕೆ ಪಾತ್ರನಾಗಬೇಕಾಗಿರುವುದು ಅತೀ ಅವಶ್ಯವಾಗಿದೆ. ಗುರು ಕೃಪೆಯೇ ಮೋಕ್ಷದ ಮೂಲ.

ಈ ಕಲಿಯುಗದಲ್ಲಿ ಪರಮಾತ್ಮನಿಗೆ ಅವತಾರ ಇರುವುದಿಲ್ಲ. ಅಧರ್ಮದ ಪರಾಭವ ಮಾಡಿ ಧರ್ಮದ ಸ್ಥಾಪನೆ ಮಾಡಲು ಸಂತರ ರೂಪದಲ್ಲಿ ಗುರು ಅವತರಿಸುತ್ತಾನೆ. ಪ್ರಾಪಂಚಿಕ ವ್ಯಾಮೋಹ ಇಲ್ಲದ ನಿಸ್ವಾರ್ಥಿಗಳಾದ ಇವರು ಯಾವಾಗಲೂ ವೈರಾಗ್ಯ ಭಾವನೆಯಲ್ಲಿಯೇ ಇರುವವರು. ಜಗತ್ತಿನ ಸುಖ, ವೈಭವ ಎಲ್ಲವನ್ನೂ ತ್ಯಜಿಸಿ ತಮ್ಮ ಸಮಾಜದ ಮತ್ತು **"ಸರ್ವೇಜನಾಃ ಸುಖಿನೋ ಭವಂತು "** ಎಂಬೋಕ್ತಿಯಂತೆ ಎಲ್ಲ ಜನರ ಅಭ್ಯುದಯದ ಬಗ್ಗೆ ನಿರಂತರ ಶ್ರೀ ಪರಮಾತ್ಮನಲ್ಲಿ ಧ್ಯಾನಿಸುವರು.

ಆದ್ದರಿಂದ ನಮ್ಮ ಸಮಾಜದ ಮೇಲೆ ಈ ಗುರುಪೀಠಗಳಲ್ಲಿ ವಿರಾಜಿತರಾದ ಗುರುಗಳ ಬಹುದೊಡ್ಡ ಉಪಕಾರವಿರುವುದು. ದೇವಾಲಯದಲ್ಲಿರುವ ಮೂರ್ತಿ ಅಚೇತನವಾಗಿರುವುದು. ಆದರೆ ಗುರು ಶ್ರೀ ಪರಮಾತ್ಮನ ಸಚೇತನ ಮೂರ್ತಿಯಾಗಿರುವರು.

ಆಧ್ಯಾತ್ಮಿಕ ವಿದ್ಯೆಯ ತವರೂರಾದ, ಸನಾತನ ಧರ್ಮವನ್ನೇ ಜಗತ್ತಿಗೆ ಸಾರಿದ ಸುಸಂಸ್ಕೃತ ನಾಡಿನಲ್ಲಿ ಹುಟ್ಟಿ ಬೆಳೆದ ಸಾರವಂತ ಸಮಾಜವಾದ ಸಾರಸ್ವತರಿಗೆ ಸನ್ಮಾರ್ಗ ದರ್ಶನ ನೀಡಲೋಸುಗ ನಾಲ್ಕು ಗುರುಪೀಠಗಳು ತಮ್ಮ ಧರ್ಮಬಾವುಟಗಳನ್ನು ಆ ಸೇತು ಹಿಮಾಚಲ ಪರ್ಯಂತರ ಹಾರಾಡಿಸುತ್ತ ನಿಂತಿವೆ.

ಇಂದಿಗೆ ಸುಮಾರು ಏಳನೆ ಶತಮಾನದಲ್ಲಿ ಗೋಮಾಂತಕದಲ್ಲಿ ಸಾರಸ್ವತರ ಕೈವಲ್ಯ ಮಠ ಅಥವಾ ಕವಳೆ ಮಠ ಎಂಬ ಶೈವ ಗುರು ಪೀಠ ಸ್ಥಾಪಿತವಾಯಿತು. ಶ್ರೀಮತ್‌ಶಂಕರಾಚಾರ್ಯರ ಗುರುಗಳಾದ ಶ್ರೀಗೋವಿಂದಯತಿವರ್ಯರ ಗುರುಗಳು ಶ್ರೀ ಗೌಡಪಾದಾಚಾರ್ಯರು ಸ್ವಾರಸ್ವತರ ಪ್ರಪ್ರಥಮ ಗುರುಗಳು . ಆದ್ದರಿಂದ ಈ ಮಠವನ್ನು ಗೌಡಪಾದಾಚಾರ್ಯಮಠವೆಂದು ಕರೆಯಲಾಗುತ್ತದೆ.ವಿದ್ಯಮಾನ ಶ್ರೀ ಸಚ್ಚಿದಾನಂದಸರಸ್ವತಿ ಸ್ವಾಮೀಜಿಯವರು ಈ ಗುರುಪರಂಪರೆಯ 76ನೇ ಯತಿವರ್ಯರು.

ಶ್ರೀಮನ್ಮಧ್ವಾಚಾರ್ಯರ ಪ್ರಭಾವದಿಂದ ಗೋಮಾಂತಕದ ಕೆಲವು ಬ್ರಾಹ್ಮಣರು ಮಧ್ವಮತಾನುಯಾಯಿಗಳಾದರು. ವೈಷ್ಣವ ಧರ್ಮದ ಪ್ರಚಾರಕ್ಕಾಗಿ, ಹರಿಯೇ ಸರ್ವೋತ್ತಮ ತತ್ವದ ಮಾಧ್ವಮತ ಸಂಪ್ರದಾಯದಲ್ಲಿ ಉತ್ತಮೋತ್ತಮ ತೇಜಸ್ವೀ ಗುರು ಪರಂಪರೆಯ ಘನ ಇತಿಹಾಸವನ್ನು ನಿರ್ಮಿಸಿದ ಶ್ರೀ ಸಂಸ್ಥಾನ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ 527 ವರ್ಷಗಳ ಸತ್ಕಾರ್ಯ ನೀಡಿದ ಈ ಮಠದ ಕೇಂದ್ರ ಪರ್ತಗಾಳಿಯಲ್ಲಿದೆ .ವಿದ್ಯಮಾನ ಶ್ರೀ ವಿದ್ಯಾಧೀರಾಜ ತೀರ್ಥವಡೆಯರ ಸ್ವಾಮೀಜಿಯವರು ಈ ಮಠ ಪರಂಪರೆಯ 23ನೆಯ ಯತಿವರ್ಯರಾಗಿದ್ದಾರೆ.

ಶ್ರೀ ಕುಂಭಕೋಣ ಮಠದ ಶಿಷ್ಯವರ್ಗದವರಾದ ಕೊಚ್ಚಿಯ ಸಾರಸ್ವತ ಬ್ರಾಹ್ಮಣರ ಕೋರಿಕೆಯಂತೆ ಕ್ರಿ.ಶ. 1541 ರಲ್ಲಿ ಕಾಶೀಮಠ ಸ್ಥಾಪಿತವಾಯಿತು .ಎಂದು ಹೇಳಲಾಗುತ್ತಿದೆ. ವಿದ್ಯಮಾನ ಶ್ರೀ ಸುಧೀಂದ್ರತೀರ್ಥ ಸ್ವಾಮೀಜಿಯವರು ಈ ಮಠಪರಂಪರೆಯ 16 ನೇ ಯತಿವರ್ಯರು

ಸಾರಸ್ವತರ ಚಿತ್ರಾಪುರ ಮಠವು 1707ರಲ್ಲಿ ಸ್ಥಾಪಿತವಾಗಿದ್ದುವಿದ್ಯಮಾನ ಶ್ರೀ ಪರಿಜ್ಞಾನಾಶ್ರಮ ಸ್ವಾಮೀಜಿಯವರು ಪ್ರಥಮರು. ಈ ಪರಂಪರೆಯ 11 ನೇ ಗುರುಗಳಾಗಿ ಶ್ರೀಶ್ರೀ ಸದ್ಯೋಜಾತ ಶಂಕರಾಶ್ರಮ ಸ್ವಾಮಿಗಳು ಶಿಷ್ಯರಿಗೆ ಸನ್ಮಾರ್ಗದರ್ಶನ ನೀಡುತ್ತಿದ್ದಾರೆ.

ಗುರು ಮತ್ತು ಧರ್ಮ ಪೀಠಗಳು ಶಿಷ್ಯವೃಂದವನ್ನು ಒಂದೆಡೆ ಸೇರಿಸಿಸುವುದಲ್ಲದೇ , ಚೇತನಕ್ಕೆ ಶಕ್ತಿಯಾಗಿ, ಕಣ್ಣುಗಳಿಗೆ ಬೆಳಕಾಗಿ, ದಾರಿದೀಪವಾಗಿ ಸಮಾಜಕ್ಕೆ ಸುಧಾರಕವಾಗಿ ಕಂಗೊಳಿಸುತ್ತಿವೆ.

## ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠದ ಶಾಖಾ ಮಠಗಳು

1 ಶ್ರೀ ಪರ್ತಗಾಳಿ ಮಠ ಪರ್ತಗಾಳಿ,
ಪೊ. ಪೈಂಗಿಣ, ಕಾಣಕೋಣ,
ಗೋವಾ (403 702) ಕಾಣಕೋಣ,

2. ಶ್ರೀ ಮಾರುತಿ ದೇವಸ್ಥಾನ,
ರೇವಣಾ ಮಠ , ಪೊ. ಕೆಪೆಮ್,
ರೇವಣಾ - ಗೋವಾ (403 705)

3. ಶ್ರೀ ಲಕ್ಷ್ಮೀ ನಾರಾಯಣ ಮಂದಿರ,
ಶ್ರೀ ವ್ಯಾಸಾಶ್ರಮ, ಮಠ ಸಸ್ತಿವಾಡಾ,
ಪೊ. ಬಿಚೋಲಿಮ್ - ಗೋವಾ (403 504)

4. ಶ್ರೀ ಮುರಲೀಧರ ಮಠ,
ಪೊ. ಕಾರವಾರ,
ಉತ್ತರ ಕನ್ನಡ (581 359)

5. ಶ್ರೀ ವೀರ ವಿಠ್ಠಲ ಮಠ,
ಮಠದ ಕೇರಿ, ಪೊ. ಅಂಕೋಲಾ,
ಉತ್ತರ ಕನ್ನಡ. (851 334)

6. ಶ್ರೀ ಬೇಟೆ ವೆಂಕಟರಮಣ ದೇವಸ್ಥಾನ,
ಪೊ. ಹೊನ್ನಾವರ,
ಉತ್ತರ ಕನ್ನಡ (851 334)

7. ಶ್ರೀ ವೆಂಕಟಟರಮಣ ದೇವಸ್ಥಾನ,
ವೆಂಕಟಾಪುರ ಮಠ, ಪೊ. ಶಿರಾಲಿ,
ಭಟ್ಕಳ, ಉತ್ತರ ಕನ್ನಡ . (581 354)

8. ಶ್ರೀ ವೆಂಕಟರಮಣ ದೇವಸ್ಥಾನ,
ಮಲ್ಯರ ಮಠ, ರಥ ಬೀದಿ, ಪೊ. ಗಂಗೊಳ್ಳಿ,
ಕುಂದಾಪುರ ಜಿಲ್ಲೆ ಉಡುಪಿ. (576 216)

9. ಶ್ರೀ ವಡೇರ ಮಠ, ವೀರ ವಿಠ್ಠಲ ರಸ್ತೆ,
ಪೋ. ಭಟ್ಕಳ, ಉತ್ತರ ಕನ್ನಡ . (581 320)

10. ಶ್ರೀ ಜೀವೊತ್ತಮ ಮಠ,
ಪೊ. ಗೋಕರ್ಣ, ಉತ್ತರ ಕನ್ನಡ, (581 326)

11. ಶ್ರೀ ಗೋಕರ್ಣ ಮಠ, ಬಸ್ ನಿಲ್ದಾಣದ
ಹತ್ತಿರ,ಹತ್ತಿರ, ಪೊ. ಬಸ್ರೂರ, ಜಿಲ್ಲೆ, ಉಡುಪಿ.

12. ಶ್ರೀ ಗೋಕರ್ಣ ಮಠ, ರಥ ಬೀದಿ,
ಪೋ. ಮಂಗಳೂರು, ದಕ್ಷಿಣ ಕನ್ನಡ, (575 001)

13. ಶ್ರೀ ದ್ವಾರಕಾನಾಥ ಭವನ,
ಶ್ರೀ ರಾಮ ಮಂದಿರ,
ಕತ್ರಕ್ ರಸ್ತೆ, ವಾಡಾಲಾ,
ಮುಂಬೈ (400 031) ಫೋ. (022) 4121535

14. ಶ್ರೀ ದ್ವಾರಕಾನಾಥ ಭವನ,
ಎಮ್.ಎನ್. ಕೃಷ್ಣರಾವ್ ಉದ್ಯಾನವನದ ಎದುರು,
29, ಕೃಷ್ಣ ರಾಜೇಂದ್ರ ರಸ್ತೆ , ಬಸವನಗುಡಿ,
ಬೆಂಗಳೂರು. (560 004) ಫೋ. (080) 6612116

15. ಶ್ರೀ ವಿದ್ಯಾಧಿರಾಜ ಸಭಾಗೃಹ,
ರಾಮನಗರ,
ಮಾಳಮಾರುತಿ ಬಡಾವಣೆ,
ಬೆಳಗಾಂವ. (590 010)
ಫೋ. (0831) 470808

16. ಶ್ರೀ ಲಕ್ಷ್ಮೀ ನಾರಾಯಣ ದೇವಸ್ಥಾನ,
ಮಾಧವಜೀಕಾದ್ವಾರದ ಹತ್ತಿರ,
ಕೆ. 22/29, ಪಂಚಗಂಗಾ ಘಾಟ,
ವಾರಣಾಸಿ, ಉತ್ತರ ಪ್ರದೇಶ.(251 001)
ಫೋ. (0542) 404419

17. ಶ್ರೀ ಜೀವೊತ್ತಮ ಮಠ, ಮುಖ್ಯರಸ್ತೆ,
ಬಸ್ ನಿಲ್ದಾಣದ ಹತ್ತಿರ, ಪೊ. ಬದರಿನಾಥ,
ಚಮೊಲಿ, ಜಿಲ್ಲೆ ಘರವಾಲ, ಉತ್ತರ ಪ್ರದೇಶ
ಫೋ. (01381) 2226/2356

18. ಶ್ರೀ ಲಕ್ಷ್ಮೀ ವೆಂಕಟರಮಣ ದೇವಸ್ಥಾನ,
ಅಂಬಿಕಾನಗರ ರಸ್ತೆ, ಪೊ. ದಾಂಡೇಲಿ,
ಉತ್ತರ ಕನ್ನಡ. (581 325)

19. ಶ್ರೀ ಲಕ್ಷ್ಮೀ ನಾರಾಯಣ ವೆಂಕಟರಮಣ ಮಠ,
ರಾಷ್ಟ್ರೀಯ ಹೆದ್ದಾರಿ - 63 ಪೊ. ಯಲ್ಲಾಪುರ
ಉತ್ತರ ಕ್ನನಡ. (581 359) ಫೋ. (08419) 21227

20. ಶ್ರೀ ಲಕ್ಷ್ಮೀ ವೆಂಕಟರಮಣ ಮಠ,
ಪೊ. ಮಂಕಿ, ಹೊನ್ನಾವರ,
ಉತ್ತರ ಕನ್ನಡ. (581 348) ಫೋ. (08387) 57550

21. ಶ್ರೀ ವಿದ್ಯಾಧೀರಾಜ ಭವನ, ಮಡಗಾಂವ ಮಠ
ಸಂಕುಲ, ಎಪ್. ಎಲ್. ಗೋಮ್ಸ್ ರಸ್ತೆ, ವಾಸ್ಕೊ-
ಗೋವಾ . (403 802) ಫೋ. (0832) 519315

22. ಶ್ರೀ ವಿದ್ಯಾಧೀರಾಜ ಭವನ, ಮಠ ಸಂಕುಲ,
ಮಠ ಗ್ರಾಮ, ಜೀವೋತ್ತಮ ನಗರ, ಮಡಗಾಂವ-
ಗೋವಾ. (403601) ಫೋ. (0832) 730937 ಪಿ ಪಿ

23. ಶ್ರೀ ಸಂಸ್ಥಾನ ಗೋಕರ್ಣ ಪರ್ತಗಾಳಿ
ಜೀವೊತ್ತಮ ಮಠ, ಶ್ರೀ ವಿದ್ಯಾಧೀರಾಜ ಭಾವನ,
ಜೀವೊತ್ತಮ ನಗರ, ಅಮರಗೋಳ, ನವನಗರ,
ಹುಬ್ಬಳ್ಳಿ. (580 025) ಫೋ. (0836) 322680

24. ಅವರ್ಸಾ ಮಠ,
ಪೊ. ಅವರ್ಸಾ, ಅಂಕೋಲಾ
ಉತ್ತರ ಕನ್ನಡ. (581 316)

25. ಮೂಡಗೇರಿ ಮಠ

26. ಬಾಳಿ ಮಠ, ಗೋವಾ

27. ಕುಕ್ಕೋಳ್ಳಿಮ್ ಗೋವಾ

28. ಪರ್ವರಿಮ್ ಗೋವಾ, ಫೋ. (0832) 226300

29. ಶ್ರೀ ಲಕ್ಷ್ಮೀ ನಾರಾಯಣ ಭವನ
ನಾಸಿಕ, ಮಹಾರಾಷ್ಟ್ರ

30. ಶ್ರೀ ಜೀವೊತ್ತಮ ಸಭಾಗೃಹ
ಕಂಡಲೂರ, ಕುಂದಾಪುರ, ಜಿಲ್ಲೆ ಉಡುಪಿ.

# ಸಾರಸ್ವತರ ಕೆಲವು ಅಡ್ಡ ಹೆಸರುಗಳು ಮತ್ತು ಅವುಗಳ ವಿವರಣೆ

| | | |
|---|---|---|
| 1. | ಕಾಮತ | ಭೂಮಾಲಿಕರು |
| 2. | ಕುಡವ | ಧಾನ್ಯ ಸಂಗ್ರಾಹಕಾರರು |
| 3. | ಡಾಂಗೆ | ಬಿಲ್ಲ್ ಸಂಗ್ರಹಕಾರರು |
| 4. | ಪಡಿಯಾರ | |
| 5. | ನಾಯಕ | ಸೈನ್ಯದಲ್ಲಿ ಪದಾಧಿಕಾರಿಗಳು |
| 6. | ಬಾಳಿಗಾ | ಕಟ್ಟುಮಸ್ತಾದ ಮನುಷ್ಯ |
| 7. | ಭಂಡಾರಿ | ಭಂಡಾರದ ಕಾವಲುಗಾರ |
| 8. | ಕೆಣಿ, ಕಿಣಿ | ಕೋಶಾಧಿಕಾರಿ |
| 9. | ಮಹಾಲೆ, ಮಲ್ಯ | ರಾಜಮಹಲುಗಳ ಮುಖ್ಯಸ್ಥ |
| 10. | ಪ್ರಭು | ಹಳ್ಳಿಯ ಮುಖ್ಯಸ್ಥ |
| 11. | ಪೈ | ವಡಿಲ ಮನುಷ್ಯ |
| 12. | ದಳವಿ, | ರಣಯತ, ರಾಜದಕ್ಷಾ, ದೇಸಾಯಿ, ದೇಶಪಾಂಡೆ, ಫಡ್ನಿಸ, ಸಬ್ನಿಸ, ಚಿಟ್ನಿಸ, ಪಗ್ನಿಸ, |
| 13. | ಭಟ್ಟ, | ಜೋಶಿ, ಆಚಾರ್ಯ, ಪುರಾಣಿ, ವೈದಿಕ ವೃತ್ತಿಯವರು |
| 14. | ಕುಲ್ಕರ್ಣಿ | ಲೆಕ್ಕಾಧಿಕಾರಿ |

ಅಲ್ಲದೇ ಈ ಕೆಳಗಿನ ಅಡ್ಡ ಹೆಸರುಗಳು ಶೆಣ್ವಿಯರಲ್ಲಿದೆ.

ಅಚ್ಮನಿ, ಅಚ್ಚಾಮೆ, ಅಗ್ನಿ, ಅಂಬೆ, ಅತ್ವಾಲ, ಬಾರಾದ, ಭಾಲೆ, ಭೆಂಡೆ, ಭಿಸೆ, ಬಿಚು, ಬನಸೆ, ಬ್ರಾಮ್ಹೆ, ಬುದ್‌ಬುದೆ, ಚಿಟ್ನಿಸ್, ಚುಬೆ, ಡಾಂಗೆ, ದೊಂಡೆ, ದುಬಾಶಿ, ಗಾಡೆ, ಗೊಡಂಬೆ, ಕಕುಂಡೆ, ಕಾಣೆ, ಕಾನ್ವಿಡೆ, ಕಬಾಡಿ, ಕಂಟಕಿ, ಕಪಾಡೆ, ಕವಡಿ, ಕಾರ್ಣಿಕ, ಕರ್ಕರೆ, ಕಡ್ಯ, ಖೊಟೆ, ಕಿರ, ಕೊಲ್ಬುಲೆ, ಕೊಟ್ನಿಸ, ಲಾಡ, ಮಹಾಜನ, ಮಹಾತ್ಮೆ, ಮಾಂಗೆ, ಮುಜುಮದಾರ, ಮೊನೆ, ಮೊರೆ, ನಭಾರ, ನಿರಂಜನ, ಪಂಡಿತ, ಪಥಾಕಿ, ಫಡ್ನಿಸ, ಪಿಂಗುಲೆ, ಪಿಂಗೆ, ರಾಮಾಯನೆ, ರಣಶೂರ, ರೆಗೆ, ಸಾಖರಖಾಂಡಿಮ, ಸಂಬಾರಿ, ಸಂಜಾರಿರೆ, ಸೆವಣೆ, ಶಿಂದೆ, ಸಿನಾರಿ, ಸುರಣ, ಸುರಸುರೆ, ಟಾಕಿ, ತೇಲಂಗ, ವಾರ್ಡೆ, ವರ್ತಿ, ವೇಲಿಂಗ, ವಾಫು, ವಾಗಳೆ, ಯಾರ್ಡಿ, ಝುಂಝುಲೆ.

ಕೆಲವೊಂದು ಸಾರಸ್ವತರು ತಮ್ಮ ಅಡ್ಡ ಹೆಸರುಗಳನ್ನು ಬದಲಿಸಿ ತಾವು ವಾಸಿಸುವ ಊರಿನ ಹೆಸರನ್ನು ಅಡ್ಡ ಹೆಸರನ್ನಾಗಿ ಇಟ್ಟು ಕೊಂಡರು.

| | | |
|---|---|---|
| 1. | ವಾಗಳೆ | ಚಿಕರಮನೆ, ತಾಂಬಡ, ಮುಂಡಕರ, ಕುಮಟಾ, ಮಡಗಾಂವ (ಕೌಂಡಿನ್ಯ ಗೋತ್ರ) |
| 2. | ರಾಜದಕ್ಷ | ನಾಡಕರ್ಣಿ, ಚಂದಾವರ್ಕರ ಗೋಕರ್ಣ (ಕೌಂಡಿನ್ಯ ಗೋತ್ರ) |
| 3. | ದಳವಿ | ಗುಲ್ವಾಡಿ (ಕೌಂಡಿನ್ಯ ಗೋತ್ರದ ಆರು ಭಾಗಗಳೊಂದಿಗೆ) |
| 4. | ಪಾಲೆಕರ | ಅಂದಾರ, ಕಲಭಾಗ, ಮುಲ್ಲಾರಪಟ್ಟಣ (ಕೌಂಡಿನ್ಯ ಗೋತ್ರ) |
| 5. | ವಾರ್ಡೆ | ಮಡಿವಾನ, ಸಶಿಕಿತ್ತಲ, ಕಂಬ್ರಾಬೈಲ, ಬನವಾಲಿ ( ವತ್ಸ ಗೋತ್ರ) |
| 6. | ಪಾನಂಡಿಕಾರ | ಬೆನೆಗಲ, ಬೆತ್ರಾಪೇಟ, ಗಂಗೊಳ್ಳಿ, ಕಲ್ಯಾಣಪುರ, ನಾಯಮಪಳ್ಳಿ, (ಭಾರದ್ವಾಜ ಗೋತ್ರ) |
| 7. | ವೈದ್ಯ | ಮಂಕಿ, ಕೊಪ್ಪಿಕರ, ಶಿರಾಲಿಸ್ತಕಾರ, ನಾಗರಕಟ್ಟೆ (ಕೌಶಿಕಗೋತ್ರ) |

| | ಕುಲದೇವರು | ಮೂಲ ದೇವಸ್ಥಾನ | ಸದ್ಯದಲ್ಲಿರುವ ದೇವಸ್ಥಾನ | ಗೋತ್ರ ಮತ್ತು ಕುಲ |
|---|---|---|---|---|
| 1. | ಸಪ್ತ ಕೋಟೇಶ್ವರ | ನಾರ್ವೆ | ನ್ಯೂ ನಾರ್ವೆ | ಕೌಶಿಕ, ಗಾರ್ಗಿಯ, ಭಾರದ್ವಾಜ, ಅತ್ರಿ |
| 2. | ಮಹಾಲಸಾ | ವೆರ್ನೆ | ಮಾರ್ಡ್ಡೋಳ | ಕೌಶಿಕ, ಗಾರ್ಗಿಯ, ಭಾರದ್ವಾಜ, ಅತ್ರಿ |
| 3. | ಮಂಗೇಶ | ಕುಶಸ್ಥಲಿ | ಮಂಗೇಶಿ | ಜಮದಗ್ನಿ, ವತ್ಸ, ಕೌಂಡಿನ್ಯ. |
| 4. | ಶಾಂತಾದುರ್ಗಾ | ಕೆಳೋಶಿ | ಕವಳೆ | ಕೌಶಿಕ , ಬಾರದ್ವಾಜ, ವತ್ಸ |
| 5. | ಸಾಂತೇರಿ ಕಾಮಾಕ್ಷಿ | ಲೊಟ್ಲಿ | ಕವಳೆ | ಕೌಶಿಕ , ಬಾರದ್ವಾಜ, ವತ್ಸ |
| 6. | ಕಾಮಾಕ್ಷಿ | ರಾಯಚುರೆ | ರಾಯಶಿರೋಡ | ಕೌಶಿಕ , ಅತ್ರಿ |
| 7. | ರವಳನಾಥ | ಪಂಡಿವಡಾ | ಮಾರ್ಶೆಲ | ಕಶ್ಯಪ |
| 8. | ನಾಗೇಶ | ಬಂಡಿವಾಡೆ | ಬಂಡಿವಾಡೆ | ಕೌಶಿಕ, ವತ್ಸ |
| 9. | ಮಹಾಲಕ್ಷ್ಮೀ | ಕೊಲಂಬೆ | ಬಂಡಿವಾಡೆ | |
| 10. | ರಾಮನಾಥ | ಲೊಟ್ಲಿ | ಕವಳೆ | ಕೌಂಡಿನ್ಯ, ವತ್ಸ |
| 11. | ದಾಮೋದರ | ಮಡಗಾಂವ | ಜಾಂಬಾವಲಿ | ಕೌಶಿಕ, ಭಾರದ್ವಾಜ, ಅತ್ರಿ |
| 12. | ಮಾಹಾಮಾಯಾ | ಗೊಲಟಿ ಗಿರದೊಳಿ | ಕೇದಾರ ಬಳಿಗ್ರಾಮ | ಕಶ್ಯಪ, ಬಾರದ್ವಾಜ, ಗೌತಮ, ವಶಿಷ್ಠ |
| 13. | ವಿಜಯದುರ್ಗಾ | ಸಂಕಲಿ | ವೇಲಿಂಗ | |
| 14. | ಭಗವತಿ | ಚಿಂಬಾಲ | ಮಾರ್ಶೆಲ | |
| 15. | ದೇವಕಿ ಕೃಷ್ಣ | ಚೊಡನಾ | ಮಾರ್ಶೆಲ | ಜಮದಗ್ನಿ, ವತ್ಸ, ಭಾರದ್ವಾಜ |
| 16. | ಗಜಾನನ | ಕೆರೆ | ಖಾಂಡೋಲಿ | ಅತ್ರಿ, ಕಶ್ಯಪ, ಕೌಂಡಿನ್ಯ |
| 17. | ಮಹಾಗಣಪತಿ | ನವೇಲಿ | ಶಿರಾಲಿ ( ಉ.ಕ.) | ಕೌಶಿಕ, ಕಶ್ಯಪ, ಭಾರದ್ವಾಜ, ಗೌತಮ |
| 18. | ಕುಂಡೋದರಿ | ನಾಗವೆ | ಅಂಕೋಲಾ( ಉ.ಕ.) | ಕೌಶಿಕ, ವತ್ಸ. |
| 19. | ಬಾಣೇಶ್ವರ ಕಾತ್ಯಾಯನಿ | ಬಾಣಾವಲಿ | ಅವರ್ಸಾ (ಅಂಕೋಲಾ) | |

| | ಸಾರಸ್ವತರಲ್ಲಿ ಇತರ ಪಂಗಡಗಳು | ವಾಸಸ್ಥಳ |
|---|---|---|
| 1. | ಸಾಸಷ್ಟಿಕಾರ | ಉತ್ತರ ಕನ್ನಡ, ದಕ್ಷಿಣ ಕನ್ನಡ, ಕೇರಳಾ. |
| 2. | ಬಾರ್ದೇಶಕಾರ | (ಹನ್ನೆರಡು ಊರುಗಳು) ಗೋವಾ, ಖಾನಾಪುರ, ಬೆಳಗಾಂವ, ಸಾವಂತವಾಡಿ |
| 3. | ಪೆಡ್ನೆಕಾರ | ಪೆಡ್ನೆ ಮಹಲ, ರತ್ನಾಗಿರಿ |
| 4. | ಕುಡಾಲದೇಶಕಾರ | ಸಾವಂತವಾಡಿಯ ಹದಿನೆಂಟು ಹಳ್ಳಿಗಳಲ್ಲಿ |
| 5. | ರಾಜಾಪುರಿ, ಭಾಲವಾಲಿಕಾರ | ಮಾಹಾರಾಷ್ಟ್ರದ ಕುಡಾಳ ಸಾವಂತವಾಡಿ, ರಾಜಾಪುರ ಭಾಲವಾಲಿ, ಪುಣೆ, ದಕ್ಷಿಣಕನ್ನಡ, ಕೊಡಗು. |

ನಮ್ಮ ಸಮಾಜದ ಏಕತೆಯ ಮೂಲ ದೇವಸ್ಥಾನಗಳಲ್ಲಿದೆ ಎಂದು ಎಲ್ಲರೂ ಹೇಳುತ್ತಾರೆ. ಸಾರಸ್ವತರ ಸಂಘಟನೆಗೆ ಮುಖ್ಯ ಕಾರಣವೂ ಇದೇ ಆಗಿದೆ. ಕೊಂಕಣಿಗರಲ್ಲಿ ಕುಲದೇವಸ್ಥಾನಗಳು ಮತ್ತು ಗುರು ಪೀಠಗಳಲ್ಲಿ ಇರುವ ವಿಶ್ವಾಸ ಹಾಗೂ ನಿತ್ಯ ಪೂಜೆ ಮತ್ತು ಉತ್ಸವಗಳಿಗೆ ಎಲ್ಲಿಲ್ಲದ ಮಹತ್ವವಿದೆ.

ಸಾರಸ್ವತರಲ್ಲಿ ಪ್ರಮುಖವಾಗಿ ಮೂರು ಭೇಧಗಳಿವೆ. ಹೊಲ ತೋಟಗಾರಿಕೆ, ಮತ್ತು ವ್ಯಾಪಾರಗಳನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡ ಗೌಡ ಸಾರಸ್ವತರು. ಇವರು ವೈಷ್ಣವರು. ಹಿಂದೆ ರಾಜಾಶ್ರಯಗಳಲ್ಲಿ ದೀವಾನ ಗಿರಿ ಮಾಡಿ ಈಗ ಸರಕಾರಿ ನೌಕರಿಗಳಲ್ಲಿ ಮನಸ್ಸು ಹಾಕಿ ದೊಡ್ಡ ಶಹರಗಳಿಗೆ ವಲಸೆ ಹೋದ ಸಾರಸ್ವತ ಸ್ಮಾರ್ಥರು. ನೌಕರಿಗಳನ್ನು ಹೆಚ್ಚಾಗಿ ಅವಲಂಬಿಸುತ್ತಿರುವ ಶೆಣ್ವೆ ಅಥವಾ ಕಾರಭಾರಿಗಳು. ಇವರು ಗೌಡ ಸಾರಸ್ವತ ಸ್ಮಾರ್ಥರು. ಎಲ್ಲರ ಕುಲದೇವರುಗಳು ಗೋವೆಯಲ್ಲಿ ಇದ್ದು ಪ್ರತ್ಯೇಕ ಮಠಾಧೀಶರನ್ನು ಹೊಂದಿರುತ್ತಾರೆ. ಗೌಡ ಸಾರಸ್ವತ ಬ್ರಾಹ್ಮಣರಿಗೆ ಗೋಕರ್ಣ ಪರ್ತಗಾಳಿ ಮಠ ಹಾಗೂ ಕೊಚ್ಚಿಯ ಕಾಶೀಮಠ. ಸಾರಸ್ವತರಿಗೆ ಶಿರಾಲಿಯ ಚಿತ್ರಾಪುರ ಮಠ, ಗೌಡ ಸಾರಸ್ವತ ಸ್ಮಾರ್ಥರಿಗೆ ಗೋವೆಯ ಕವಳೀ ಮಠಗಳು ಆಧ್ಯಾತ್ಮಿಕ ಚಟುವಟಿಕೆಗಳ ಕೇಂದ್ರಗಳಾಗಿವೆ.

1657ರಲ್ಲಿ ಶ್ರೀ ಕಾಶಿಮಠಾಧೀಶ ಶ್ರೀ ಉಪೇಂದ್ರತೀರ್ಥರು ನೀಡಿದ ರಾಯಸದಂತೆ ಮತ್ತು ಶ್ರೀ ಗೋಕರ್ಣ ಮಠಾಧೀಶ ಶ್ರೀ ಇಂದಿರಾಕಾಂತ ಸ್ವಾಮೀಜಿಯವರು ಬರೆದ ದಾಖಲೆ ಪ್ರಕಾರ ಭಾಲವಾಲಿಕರ,ಬಾರದೇಶಕರ್, ಪೆಡ್ನೇಕರ್, ಸಾಸಷ್ಟಿಕರ್ ಮತ್ತು ಲೊಟ್ಲಿಕರ್ ಇವರು ಗೌಡಸಾರಸ್ವತ ಬ್ರಾಹ್ಮಣರೇ ಆಗಿದ್ದಾರೆ. **ಹಿಸ್ಟರಿ ಆಫ್ ಕವಳೆಮಠ** ಎಂಬ ಗ್ರಥದಲ್ಲಿ ರಾಜಾಪುರಿ ಮತ್ತು ಬಾಲವಾಲಿಕರ್ ಸಾರಸ್ವತ ಬ್ರಾಹ್ಮಣರೆಂದು ಉಲ್ಲೇಖಿಸಲಾಗಿದೆ. 1957ರಲ್ಲಿ ಪ್ರಕಟವಾದ **ಸಾರಸ್ವತ ಭೂಷಣ** ಮತ್ತು 1994ರಲ್ಲಿ ಪ್ರಕಟವಾದ **ಜಿ. ಎಸ್.ಬಿ.ಪರಿಚಯ** ಪುಸಕ್ತಗಳಲ್ಲಿ ಇವುಗಳನ್ನು ಉಲ್ಲೇಖಿಸಲಾಗಿದೆ. 1910ರ ಮುಂಬಯಿ ಗೆಜೆಟಿಯರ್‌ನಲ್ಲಿ ಬಾಲವಾಲಿಕರ್ ಜಿ. ಎಸ್.ಬಿ. ಬ್ರಾಹ್ಮಿನ್ಸ್ ಎಂದು ಪ್ರಕಟಿಸಲಾಗಿದೆ.

ಸಾಂಸ್ಕೃತಿಕವಾಗಿ ಈ ಪಂಗಡಗಳಲ್ಲಿ ಯಾವುದೇ ಭೇದ ಇಲ್ಲದಿರುವುದರಿಂದ ಈ ಮೂರು ಪಂಗಡಗಳನ್ನು ವಿಶಾಲಾರ್ಥದಲ್ಲಿ ಸಾರಸ್ವತರು ಎನ್ನುತ್ತಾರೆ. ಈ ಕೃತ್ರಿಮ ಭೇದಗಳು ಸಮಾಜದ ಪ್ರಗತಿಗೆ ಧಕ್ಕೆ ತರಬಾರದೆಂಬ ಉದ್ದೇಶದಿಂದ ಎಲ್ಲ ಬ್ರಾಹ್ಮಣರು ಒಂದೇ ಎಂದು ತಿಳಿದು ಮದುವೆ ಮತ್ತು ಧಾರ್ಮಿಕ ಕಾರ್ಯಗಳನ್ನು ಒಟ್ಟಾಗಿ ನಡೆಸಬೇಕೆಂದು ಮಠಾಧೀಶರು ಆಜ್ಞಾಪಿಸಿದರು.

**ಗೌಡ ಸಾರಸ್ವತರು ಎಂದ ಕೂಡಲೇ ಗೋವಾದಿಂದ ಬಂದವರು ಎಂದು ಕಲ್ಪಿಸ ಲಾಗುತ್ತದೆ. ಆದರೂ ಗೋವಾಕ್ಕೂ ಗೌಡ ಸಾರಸ್ವತರಿಗೂ ಬಹಳ ಸಾಮಾಜಿಕ, ಧಾರ್ಮಿಕ ಹಾಗೂ ಆತ್ಮೀಯ ಸಂಬಂಧವಿರುವುದು ನಿಜ. ತಮ್ಮ ಧರ್ಮ, ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಸಲುವಾಗಿ ಗೋವಾದ ವಾಸಸ್ಥಾನವನ್ನು ತೊರೆದ ಗೌಡಸಾರಸ್ವತರು ಇಂದಿಗೂ ತಮ್ಮ ಕುಲದೇವ ಸ್ಥಾನಗಳೊಂದಿಗೆ ಇರುವ ಸಂಬಂಧವನ್ನು ಹಾಗೇ ಉಳಿಸಿಕೊಂಡಿದ್ದಾರೆ.**

# ನಮ್ಮ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ

ಈ ಧರ್ಮಭೂಮಿ ಭಾರತದಲ್ಲಿ ಸ್ವಭಾವತ ಸರಳರೂ, ಸಾರವಂತಿಕೆಯುಳ್ಳವರೂ ಪ್ರಾಮಾಣಿಕರೂ ಕರ್ಮಯೋಗಿಗಳು ಎಂದು ಸಾರಸ್ವತ ಸಮಾಜದವರನ್ನು ಅನ್ಯ ಸಮಾಜವು ಗುರುತಿಸುತ್ತದೆ. ಜೀವನದ ಎಲ್ಲ ಸುಖ ದುಃಖಗಳನ್ನು ದೇವರ ಪ್ರಸಾದವೆಂದೇ ಸ್ವೀಕರಿಸುವ ವಿನೀತ ಭಾವವನ್ನು ಈ ಸಮಾಜದಲ್ಲಿ ಕಾಣಬಹುದು. ದೇವರಲ್ಲಿ ಮತ್ತು ಗುರುಹಿರಿಯರಲ್ಲಿ ಶ್ರದ್ಧಾ ಭಕ್ತಿಗಳನ್ನಿಟ್ಟು ತಮ್ಮ ಮಕ್ಕಳನ್ನು ಯೋಗ್ಯ ರೀತಿಯಲ್ಲಿ ಬೆಳೆಸುವ ಉದಾತ್ತ ಸಂಸ್ಕೃತಿಯನ್ನು ಘೋಷಿಸಿಕೊಂಡು ಬರುವಲ್ಲಿ ಗೌಡಸಾರಸ್ವತ ಮಹಿಳೆಯರ ಪಾತ್ರ ಬಹಳಹಿರಿದು.

**ಕಾರ್ಯೇಶು ದಾಸೀ, ಕರುಣೇಶು ಮಂತ್ರಿ, ಭೋಜ್ಯೇಶು ಮಾತಾ,**
**ರೂಪೇಶು ಲಕ್ಷ್ಮೀ, ಕ್ಷಮಯಾ ಧರಿತ್ರೀ, ಶಯನೇಶು ರಂಭಾ**

ಹೀಗೆಲ್ಲ ಭೋಧಿಸುವ ನಮ್ಮ ಪರಂಪರೆಯಲ್ಲಿ ಅದನ್ನು ಸಾಧಿಸಿ ತೋರಿಸುವಲ್ಲಿ ಸಾರಸ್ವತ ಮಹಿಳೆ ಪ್ರಮುಖಪಾತ್ರವನ್ನು ಪ್ರಚುರ ಪಡಿಸಿದ್ದಾರೆ.

ಮನೆಯನ್ನು ನಿರ್ವಹಿಸುದರಲ್ಲಿ, ಖರ್ಚುವೆಚ್ಚಗಳನ್ನು ತೂಗಿಸುವದರಲ್ಲಿ ಸೇವೆ ತ್ಯಾಗ ಕಷ್ಟ ಸಹಿಷ್ಣುತೆಗಳಲ್ಲಿ ಮತ್ತು ನಮ್ಮ ಭಾರತೀಯ ಸಂಸ್ಕೃತಿಯ ರಕ್ಷಣೆ ಮಾಡುವಲ್ಲಿ ಈ ಮಹಿಳೆಗೆ ಸಾಟಿ ಯಾರೂ ಇಲ್ಲ. ಪ್ರಾತಃ ಕಾಲದಲ್ಲಿ ಮನೆಯನ್ನು ಶುಭ್ರಗೊಳಿಸಿ ಮೆಟ್ಟಲು ಬರೆದು ಪ್ರಾರಂಭವಾಗುವ ಆಕೆಯ ದಿನ ಒಂದು ನಿಮಿಷದ ಬಿಡುವಿಲ್ಲದೆಯೇ ರಾತ್ರಿಯೆಲ್ಲರೂ ಮಲಗಿದ ಮೇಲೆಯೇ ಕೊನೆಗೊಳ್ಳುವುದು. ತರತರಹದ ತಿಂಡಿ ತಿನಿಸು, ಊಟೋಪಚಾರಗಳಿಂದ ಮನೆಮಂದಿಯನ್ನು, ಅತಿಥಿಗಳನ್ನು ಹಾಗೂ ಆಳು ಕಾಳುಗಳನ್ನು ತಣಿಸುವುದರೊಂದಿಗೆ ಮನೆಯ ಒಪ್ಪ ಓರಣ ಅಚ್ಚು ಕಟ್ಟು ಎಲ್ಲದರಲ್ಲೂ ಅವಳದ್ದು ಸಿದ್ಧ ಹಸ್ತ.

**'ಗೃಹಿಣೀ ಗೃಹಂ ಉಚ್ಯತೇ ಎಂಥಾ ಉಕ್ತಿಯಲ್ಲವೇ ?**

ಆದಾಗ್ಯೂ ಮಹಿಳೆಯರನ್ನು ಕಾಣುವ ದೃಷ್ಟಿ, ನಡೆಸಿಕೊಳ್ಳುವ ಪರಿ ಪೂರ್ತಿ ಬದಲಾಗಿಲ್ಲ, ಕಾಲಕ್ಕನುಸರಿಸಿ ಇನ್ನೂ ಬದಲಾಗಬೇಕಾಗಿದೆ. ಹಿಂದಿನ ಕಾಲದಲ್ಲಿ ಹೆಣ್ಣನ್ನು ಶಾಲೆಗೆ ಕಳಿಸುತ್ತಿರಲಿಲ್ಲ, ತಾಯಿಯು ತನ್ನ ಮಗಳಿಗೆ ಕೆಲವು ಶ್ಲೋಕಗಳನ್ನು ದಾಸರ ಹಾಡುಗಳನ್ನು ಮತ್ತು ಜಾನಪದ ಗೀತೆಗಳನ್ನು ಕಂಠಪಾಠಮಾಡಿಸುತ್ತಿದ್ದಳು. ಹೆಣ್ಣು ಎಂದೂ ತನ್ನನ್ನುವರಿಸುವವನ ಬಗ್ಗೆ ಕೇಳುತ್ತಿರಲಿಲ್ಲ. ಮನೆಯ ಹಿರಿಯರು ನಿಶ್ಚಯಿಸಿದ ಮದುಮಗನನ್ನು ವರಿಸುತ್ತಿದ್ದಳು. ಕಷ್ಟವೋ ಸುಖವೋ, ಗಂಡ ಒಳ್ಳೆಯವನೋ, ಕೆಟ್ಟವನೋ, ಜೀವನವಿಡಿ ತಾಳ್ಮೆಯಿಂದ ಅವನೊಡನೆ ಬಾಳ್ವೆ ನಡೆಸುತ್ತಿದ್ದಳು. ನೀರು ಸೇದುವುದು, ಕುಟ್ಟುವದು, ಹಾಲುಹಿಂಡುವದು ಮುಂತಾದ ಕೆಲಸಗಳಲ್ಲಿ ದಿನ ಕಳೆದು ಹೋಗುತ್ತಿದ್ದವು, ಹಲವಾರು ಧಾರ್ಮಿಕ ಕಟ್ಟಳೆಗಳ ಜೊತೆ ಬಿಗಿ ನಿಬಂಧಗಳಿದ್ದವು. ಅವರ ವ್ಯಕ್ತಿತ್ವದಲ್ಲಿ ಭಯಭಕ್ತಿಗಳು ಮತ್ತು ತಗ್ಗಿಬಗ್ಗುವ ನಡವಳಿಕೆಯನ್ನು ಕಾಣಬಹುದಿತ್ತು..ಮನೆಯಲ್ಲಿ ಪ್ರತ್ಯೇಕ ದೇವರ ಕೋಣೆ ಇದ್ದು ದೇವರಿಗೆ ನಿತ್ಯ ಪೂಜೆ, ಭಜನೆ ಮತ್ತು ಶ್ಲೋಕ ಪಠಣ ಇವರ ನಿತ್ಯಜೀವನದಲ್ಲಿ ಅತಿದೊಡ್ಡ ಮಾತ್ರ ನಿರ್ವಹಿಸುತ್ತದೆ. ಮಳೆಗಾಲಕ್ಕಾಗಿ ಹಪ್ಪಳ ಸಂಡಿಗೆ ಸಿದ್ದಪಡಿಸಿಕೊಳ್ಳುವುದರಿಂದ ಹಿಡಿದು ಉತ್ಸವ ಹಬ್ಬ ಹುಣ್ಣಿಮೆಗಳಾಚರಣೆಯಲ್ಲಿ ನೆರೆಹೊರೆಯವರಲ್ಲಿ ಪರಸ್ಪರ ಸಹಕರಿಸುವುದು ಸಾರಸ್ವತ ಮಹಿಳೆಗೆ ರಕ್ತಗತವಾಗಿ ಬಂದಗುಣ.

ಸಾರಸ್ವತ ಮಹಿಳೆಯರು ಸ್ವಭಾವತಃ ಆಭರಣ ಪ್ರಿಯರೂ, ಅಲಂಕಾರಗಳಲ್ಲಿ ವಿಶೇಷ ಆಸಕ್ತಿಯುಳ್ಳವರಾಗಿದ್ದಾರೆ. ಆದರೆ ಧನ ಮತ್ತು ಒಡವೆಗಳಿಗಾಗಿ ಗಂಡನನ್ನು ಪಿಡಿಸುವ ಜಾಯಮಾನದವರಲ್ಲ,

ಬದಲಾಗಿ ಕಷ್ಟ ಕಾರ್ಪಣ್ಯಗಳಲ್ಲಿ ಮತ್ತು ಸೋಲಿನಲ್ಲಿ ದೇವರ ಮೇಲೆ ಅನನ್ಯ ಭಕ್ತಿಯಿಟ್ಟು ಕುಟುಂಬ ಕಲ್ಯಾಣಕ್ಕಾಗಿ ಶಕ್ತಿ ಮೀರಿ ದುಡಿಯುವ ಉತ್ಸಹವನ್ನು ಕಾಣುತ್ತೇವೆ.

ಕಾಲಬದಲಾದಂತೆ ಸಮಾಜಿಕ ಮೌಲ್ಯಗಳು ಬದಲಾಗಿರುವದರಿಂದ ಆರ್ಥಿಕವಾಗಿ ಸಾಮಾಜಿಕವಾಗಿ ಮಹಿಳೆಗೆ ಹೆಚ್ಚಿನ ಸ್ವಾತಂತ್ರ್ಯ ಮತ್ತು ಅವಕಾಶಗಳು ಲಭ್ಯವಾಗುತ್ತಿವೆ. ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ಸಿಗತೊಡಗಿದ್ದು ನಮ್ಮ ಮಹಿಳೆಯರೇ ಹೆಚ್ಚಿನ ಸಾಧನೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಚಲನಚಿತ್ರ ಸಂಗೀತ ಸಾಹಿತ್ಯ ನಾಟಕಗಳಲ್ಲಿ ಹಾಗೂ ಎಂಜಿನೀಯರಿಂಗ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ನಮ್ಮ ಸಮಾಜದ ಮಹಿಳೆಯರ ಪ್ರತಿನಿಧಿತ್ವ ಕಂಡುಬರುತ್ತಿದೆ. ಇಂದು ಸಾರಸ್ವತ ಮಹಿಳೆ ದೇಶ ವಿದೇಶದಲ್ಲಿ ಎಲ್ಲ ಮಹತ್ವದ ಸ್ಥಾನಗಳನ್ನು ಅಲಂಕರಿಸಿದ್ದಾರೆ. ಪ್ರತಿಯೊಂದು ಕುಟುಂಬದಲ್ಲಿ ವೈದ್ಯೆಯನ್ನೋ, ಕಂಪ್ಯೂಟರ ತಜ್ಞರನ್ನೋ, ಬ್ಯಾಂಕ್ ನೌಕರಳನ್ನೋ ಕಾಣಬಹುದಾಗಿದೆ. ವಿದ್ಯಾಬುದ್ಧಿಗಳಲ್ಲಿ ಸ್ತ್ರೀ ಶಿಕ್ಷತರಾದದ್ದಲಿಂದಲೇ ಇಡೀ ಕುಟುಂಬವೇ ಶಿಕ್ಷಿತಳಾದಂತೆ ಆಗಿದೆ. ಇದಕ್ಕೆ ಮುಖ್ಯವಾಗಿ ನಮ್ಮ ಪುರುಷರು ಮಹಿಳೆಯರನ್ನು ನಡೆಸಿಕೊಳ್ಳುವ ಬದಲಾದ ದೃಷ್ಟಿಕೋನವೇ ಕಾರಣ. ಇಂದು ನಮ್ಮ ಮಹಿಳೆಯರು ಎಂದಿಗಿಂತ ಹೆಚ್ಚಾಗಿ ಗೌರವ ಮತ್ತು ಸ್ವಾತಂತ್ರವನ್ನು ಪಡೆಯುತ್ತಿದ್ದಾರೆ. ಆದರೆ ಈ ಸ್ವಾತಂತ್ರ ಸ್ವೇಚ್ಛಾಚಾರವಾಗದಂತೆ ನೋಡಿಕೊಳ್ಳವುದು ಅವಶ್ಯವಾಗಿದೆ. ನಮ್ಮ ಸಮಾಜದಲ್ಲಿ ಇಂದು ವಿಧವೆ ಮತ್ತು ಅಂತರಜಾತಿಯ ವಿವಾಹಗಳಿಗೆ ನಿಷೇಧವಿಲ್ಲ. ಇಂದಿನ ಪರಿಸ್ಥಿತಿಗಳೊಂದಿಗೆ ನಾವು ಹೊಂದಾಣಿಕೆ ಮಾಡಿಕೊಂಡಿದ್ದೇವೆ. ವಿಧವೆಯ ಕೇಶ ಮುಂಡಣ ಮತ್ತು ಕೆಂಪು ಸೀರೆ ಉಡುವ ಪರಿಪಾಟ ನಿರ್ನಾಮವಾಗಿದೆ. ಆದರೂ ವಿಧವೆಗೆ ಇನ್ನೂ ಹೆಚ್ಚಿನ ಸ್ಥಾನಮಾನ, ಗೌರವ ಮತ್ತು ಹಕ್ಕುಗಳನ್ನು ನೀಡಬೇಕಾಗಿದೆ. 9 ತಿಂಗಳು ಹೆತ್ತು ಹೊತ್ತು ಸಲಹಿ ಬೆಳಸಿದ ತನ್ನದೇ ಮಗನ ಮತ್ತು ಮಗಳ ಶುಭಕಾರ್ಯಗಳಲ್ಲಿ ಪ್ರಾಮುಖ್ಯತೆಯನ್ನು ಅವಳಿಗೆ ನೀಡಬೇಕಾಗಿದೆ. ದೇವರ ಕಾರ್ಯ ಮತ್ತು ಆರಕ್ಷತೆಗಳಲ್ಲಿ ಅವಳಿಗೆ ಮುಂದೆ ಕರೆಯಬೇಕು. ಕರಿಮಣಿ ಕಾಲುಂಗರ ಇವು ವಿವಾಹದ ಸಂದರ್ಭದಲ್ಲಿಯ ಸಂಕೇತಗಳೆಂದಾದರೆ ವಿಧವೆ ಅದನ್ನು ತಾಜ್ಯ ಮಾಡಬಹುದೇನೋ ! ಆದರೆ ತಿಲಕವನ್ನಿಟ್ಟರುವದು, ಹೂಮುಡಿದುಕೊಳ್ಳುವದು ಆಕೆ ಕೌಮಾರ್ಯದಿಂದಲೇ ಮಾಡಿದುದರಿಂದ ಬಲವಂತದಿಂದ ಅದರ ತ್ಯಾಜ್ಯ ಸರ್ವತಾ ಸಲ್ಲದು ಬದಲಾದ ಈ ಕಾಲದಲ್ಲಿ ಈ ನಿಯಮ ಹಳೆಯ ನಿರ್ಭಂಧಗಳು ಸಡಿಲಗೊಂಡರೆ ಕ್ಷೇಮ.

ಕುಟುಂಬದ ಆರ್ಥಿಕ ದೃಷ್ಟಿಯಿಂದ ಮನೆಯಿಂದ ಹೊರಹೋಗಿ ದುಡಿಯುವ ಮಹಿಳೆಗೆ ಮನೆಗೆಲಸದಲ್ಲಿ ಗಂಡನ ಸಹಕಾರದ ಅಗತ್ಯವಿದೆ. ದುಡಿಯುವ ಗೃಹಣಿಯ ಮೇಲೆ ಕುಟುಂಬದ ಎಲ್ಲ ಸದಸ್ಯರು ವಿಶ್ವಾಸವಿರಿಸಬೇಕು. ವಿಧವೆ ಮತ್ತು ವಿಚ್ಛೇಧಿತಳಿಗೆ ಸಮಾಜದಲ್ಲಿ ಮರುವಿವಾಹವನ್ನು ಪುಷ್ಟಿಕರಿಸಬೇಕು. ವರದಕ್ಷಿಣೆ ಪಿಡುಗನ್ನು ತೊರೆದದಿನ ನಮ್ಮ ಸಮಾಜ ಸರ್ವಶ್ರೇಷ್ಟ ಸಮಾಜ ಎಂದೆನಿಸಿಕೊಳ್ಳುವುದು. ಹೆಣ್ಣನ್ನು ಸಂತೋಷವಾಗಿರಿಸಲು ಪ್ರಯತ್ನಿಸಿದರೆ ಇಡೀ ಕುಟುಂಬವೇ ಸಂತೋಷದಲ್ಲಿರುವದೆಂಬ ಸತ್ಯ ಎಲ್ಲರೂ ಅರಿಯಬೇಕಾಗಿದೆ.

ಅನ್ಯಸಮಾಜಕ್ಕೆ ತುಲನೆಮಾಡಿದರೆ ನಮ್ಮ ಸಮಾಜದ ಮಹಿಳೆಯರು ಎಲೆ ಮರೆಯ ಕಾಯಿಯಂತೆ ದೇಶ ಸೇವೆ ಮತ್ತು ಸಂಸ್ಕೃತಿ ರಕ್ಷಣೆಯಲ್ಲಿ ಗಣನೀಯ ಪಾತ್ರ ವಹಿಸಿದ್ದಾರೆ. ಎಂಬುದಕ್ಕೆ ಎರಡು ಮಾತಿಲ್ಲ. ಸಂವಿಧಾನದ ದೃಷ್ಟಿಯಲ್ಲಿ ಸ್ತ್ರೀ ಪುರುಷರು ಸಮಾನರು ಎಂದಾದರೆ ವ್ಯವಾಹರಿಕವಾಗಿ ಈ ನಿಯಮ ಎಷ್ಟು ಪಾಲಿಸಲ್ಪಡುತ್ತದೆ. ಸಾರಸ್ವತ ಸಮಾಜದಲ್ಲಿ ಇಂದು ಕಾಣಸಿಗುವ ಪ್ರಸಿದ್ಧ ಮೇಧಾವಿಗಳನ್ನು ಸಾಹಿತಿಗಳನ್ನು ಕಲಾಕಾರರನ್ನು ಉದ್ದಿಮೆದಾರರನ್ನು ಸಮಾಜಕ್ಕೆ ನೀಡಿದ ಸಾರಸ್ವತ ಮಹಿಳೆಯರನ್ನು ನಮ್ಮ ಸಮಾಜದ ಗುರುತಿಸಿದೆಯೇ ? ಇವರ ಬಗ್ಗೆ ಆಳವಾದ ಚಿಂತನೆ ಅಗತ್ಯವಿದೆ.



# ಪರಂಪರಾಗತ ಸಾರಸ್ವತ ಊಟೋಪಹಾರಗಳು

ಆಡುಮುಟ್ಟದ ಗಿಡವಿಲ್ಲ ಎಂಬ ಗಾದೆಯಂತೆಯೇ ಕೊಂಕಣಿಗರಿಗೆ ತಿಳಿಯದ ತಿನಿಸುಗಳಿಲ್ಲ ಎಂದು ಹೇಳಬಹುದು. ಬಹುಹಿಂದಿನಿಂದಲೂ ಕೊಂಕಣಿಗರು ಪಾಕ್‌ಪ್ರವೀಣರಾಗಿದುದ್ದರಿಂದ ಇಂದು ಎಲ್ಲೆಡೆ ಸಾರಸ್ವತರ ಹೊಟೆಲುಗಳಿಗೆ ಜನರು ಮುಗಿಬೀಳುತ್ತಾರೆ. ಇವರಿಂದಲೇ ಪ್ರಾರಂಭಿಸಲ್ಪಟ್ಟ ಉಡುಪಿ ಹೊಟೆಲುಗಳಿಗೆ ಇಂದು ಜಗತ್ತಿನಾದ್ಯಂತ ಪ್ರಸಿದ್ಧಿ ಪಡೆದಿವೆ.

ಕೊಂಕಣಿಗಳು ಬಳಸದ ಸೊಪ್ಪು, ಕಾಳುಕಡಿ ಇರಲಿಕ್ಕಿಲ್ಲ ಬಿಟ್ಟಿಯಾಗಿ ಬೆಳೆಯುವ ''ತಾಯ್‌ಕಿಳೋ'', ಹಲಸಿನ ಹಣ್ಣಿನ ದಿಂಡಿನ ಹಸಿ ಚಟ್ನಿ, ತಾಯ್‌ಕಿಳೋ, ಬ್ರಾಹ್ಮಿ (ಒಂದೆಗಲ), ಪೆರಲಎಲೆ, ತುಪಕಡಿ'', ಎಲೆಗಳಿಂದ ತಯಾರಿಸಿದ ಅಂಕರೆ ತಾಂಬೋಳಿ, ಪಡವಲ ಬೀಜದ ತಾಂಬಳಿ, ಔಡಲ ದೇಟಿನ ಸಾರ್ ಕಡಿ, ಮೆಂತು ಸೊಪ್ಪಿನ ದೇಟುಗಳ ಸೂಪು, ನುಗ್ಗೆ ಸೊಪ್ಪಿನ ಮತ್ತು ಹೂವಿನ ರುಚಿಕರ ವ್ಯಂಜನಗಳನ್ನೆಲ್ಲ ಮಾಡಬಹುದೆಂದರೆ ಆಶ್ಚರ್ಯವಲ್ಲವೇ? ತೊಗರಿಬೇಳೆಯೊಂದರಿಂದಲೇ ಹತ್ತೆಂಟು ಬಗೆಯ ಕೊಳೆಂಬೋ, ಸಾರ್, ಆಂಬಟ, ವರಣ, ತೊಯ್ ಮಾಡುವ ಪರಿಣತರಿವರು.

''ಫೋಡಿ''ಗಳ ವೈವಿಧ್ಯವೂ ಅಷ್ಟೇ. ಹಲಸಿನಕಾಯಿ, ಹಾಗಲಕಾಯಿ, ಬೆಂಡೆ, ಬದನೆ, ಸುವರ್ಣಗಡ್ಡೆ, ಶಾವಿಗಡ್ಡೆ, ಬೇರಹಲಸು, ಕಳಲೆ ಮತ್ತು ಅಣಬೆಗಳಂತಹ ತರಕಾರಿಗಳನ್ನು ತೆಳ್ಳಗೆ ಸವರಿ ಉಪ್ಪು, ಮಸಾಲೆ, ಅಕ್ಕಿಹಿಟ್ಟು, ಲೇಪಿಸಿ ಮಿತವಾದ ಎಣ್ಣೆಗಳಿಂದ ಮಂದಾಗ್ನಿಯ ಮೇಲೆ ಹುರಿದ ''ಫೋಡಿ''ಗಳು ಕೊಂಕಣಿಗಳ ವಿಶಿಷ್ಠ ವ್ಯಂಜನಗಳೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ದ್ವಿದಳ ಧಾನ್ಯಗಳನ್ನೆಲ್ಲ ಮೊಳಕೆತರಿಸಿ ವಿಪುಲವಾಗಿ ಕಾಯಿತುರಿ ಮಸಾಲೆ ಸೇರಿಸಿ ರುಬ್ಬಿ ವಿಶಿಷ್ಟ ಪದಾರ್ಥ ತಯಾರಿಸುತ್ತಾರೆ. ಪಾಗಾರದ ಅಂಚಿಗೋ ಬಚ್ಚಲ ಹರಿನೀರಿನ ಬದಿಯಲ್ಲೋ ವಿಪುಲವಾಗಿ ಬೆಳೆಯುವ ಏಕಪಾನ (ಬ್ರಾಹ್ಮಿ) ತಂಬಳಿಗೆ ಅತಿ ಯೋಗ್ಯ. ಮುರುಗಲ ಹಣ್ಣಿನಿಂದ ಮಸಾಲೆ ಬೆರೆಸಿದ ಸುಂದರ ಬಣ್ಣದ ಸೋಲ್‌ಕಡಿ ಬಾಯಿರುಚಿ ಜೊತೆಗೆ ಆರೋಗ್ಯಕ್ಕೂ ಹಿತಕರ. ''ಅಮಟೆಕಾಯಿ ಘಶಿ'' ಮಾವಿನಕಾಯಿ ''ಕೋಳು'' ಬಿಂಬಲಕಾಯಿ, ವಟಾಣಿ ಇತ್ಯಾದಿ ಸೇರಿಸಿದ ''ಕೊದ್ದೆಲು''. ಮಾವಿನ ಹಣ್ಣಿನ ''ಸಾಸಮೆ''. ಏನೂ ಹೊಳೆಯದಿದ್ದಾಗ ಇಂಗು ಕರಿಬೇವಿನ ಒಗ್ಗರಣೆ ಹೊಂದಿದ ಶುಂಠಿ ಹಾಕಿದ ತೊಗರಿ ಬೆಳೆಯೆ ಘಮಘಮಿಸುವ ''ದಾಳಿತೋಯ್'' ಇದ್ದೇ ಇರುತ್ತದೆ. ದಾಳಿತೋಯ್ ಕೊಂಕಯಿಗರ ''ಟ್ರೇಡ್ ಮಾರ್ಕ''. ನಾಲಿಗೆ ರುಚಿ ಹೋಗಿ ಬಾಯಿ ಸಪ್ಪಗಾದಾಗ ಜುಮ್ಮನಕಾಯಿ ಹಾಕಿದ ಖಾರವಾದ ''ತೆಪ್ಪಳಾ ಆಂಬಟ'' ಬೇಕೆ ಬೇಕು. ಇದರ ಜೊತೆಗೆ ಗೊಜ್ಜು ಭರತ ಸಾಸಿಮೆಗಳಂತಹ ವ್ಯಂಜನಗಳಿದ್ದೇ ಇರುತ್ತವೆ. ಹಲಸಿನ ಕಾಯಿಚಕ್ಕೆ ''ಸುಶೇಲ್'' ಆಲೂಗಡ್ಡೆ, ಬಾಳೆಕಾಯಿ, ಸುಕ್ಕೆ, ಕೇಸುವಿನ ಎಲೆಗಳಿಂದಾದ ಮಸಾಲೆ ಸೇರಿಸಿದ ಪತರೋಡೆ'', ಬಸಳೆ ಸೊಪ್ಪಿನ ಪಲ್ಯೆ, ಬೆಂಡೆ, ತೊಂಡೆಗಳಂತಹ ತರಕಾರಿಗಳಿಂದಾದ ಉಪಕರಿಗಳು ವಾರಕ್ಕೊಮ್ಮೆ ಹೊಟ್ಟೆ ಸೇರುತ್ತವೆ.

ಜಗತ್ತಿನಲ್ಲಿಯ ಒಳ್ಳೆಯ ವಸ್ತುಗಳನ್ನೆಲ್ಲ ತಿನ್ನಬೇಕೆನ್ನುವ ಸಾರಸ್ವತರು ವಿಪುಲವಾಗಿ ತೆಂಗಿನಕಾಯಿಯನ್ನು ಅಡುಗೆಗೆ ಬಳಸುವದು ರೂಢಿ. ''ಆಪ್ಪಿಮಿಡಿ'' ಉಪ್ಪಿನಕಾಯಿಗೆ ಎಲ್ಲರೂ ಹಾತೊರೆಯುತ್ತಾರೆ. ಕರಮಲಕಾಯಿ ಎಳೆಬಿದುರು ಅಮಟೆಕಾಯಿ ಬಿಂಬಲಕಾಯಿ ಎಳೆ ಮೆಣಸು ಹೆರಿಳಕಾಯಿಗಳ ಉಪ್ಪಿನಕಾಯಿಗಳಂತೆ ಕುಂಬಳ ಸಂಡಿಗೆ, ಮಜ್ಜಿಗೆ, ಮೆಣಸಿನ ಸಂಡಿಗೆ, ಬಾಳೆಕಾಯಿ ಮತ್ತು ಉದ್ದಿನ ಹಪ್ಪಳಗಳಿಗೆ ಸದಾ ಬೇಡಿಕೆ ಇರುತ್ತದೆ.

ಇತರರಂತೆ ಬೆಳಿಗ್ಗೆ ಎದ್ದೊಡನೆ ಒಂದು ಲೋಟ ಚಹಾವನ್ನು ಕುಡಿದು ತೃಪ್ತಿಪಡುವವರಲ್ಲ ಕೊಂಕಣಿಯವರು. ಅವರಿಗೆ ಭಿಮ್ಮನೆಯ ನಾಷ್ಟಾ ಬೇಕು. ದೋಸೆಗಳೆಂದರೆ ಅವರಿಗೆ ಪಂಚಪ್ರಾಣ. ದೋಸೆಯ ದಶಾವತಾರಗಳ ದರ್ಶನ ಪಡೆಯಬೇಕಾದರೆ ಸಾರಸ್ವತರ ಮನೆಗಳಿಗೆ ದಾಳಿ ಇಡಬೇಕು. ಹಿಂದಿನ ರಾತ್ರಿಯೇ ನೆನೆಹಾಕಿದ ಅಕ್ಕಿಯೊಂದಿಗೆ ಎಳೆಕೊಬ್ಬರಿಯನ್ನು ಧಾರಾಳವಾಗಿ ಸೇರಿಸಿ ಬೆಣ್ಣೆಯಂತೆ ನಯವಾಗಿ ರುಬ್ಬಿ, ಹೂವಿನಷ್ಟು ಹಗುರವಾಗಿ ಹೊಗೆಯಾಡುತ್ತಿರುವ ದೋಸೆಗಳನ್ನು ಬಾಯಿ ಚಪ್ಪರಿಸಿ ಒಂದೊಂದಾಗಿ ಮೆಲ್ಲುತ್ತಿದ್ದರೆ ಹಸಿವು ಹಿಗ್ಗುತ್ತಾ ಹೋಗುವುದು. ಸೌತೆಕಾಯಿ, ಮೊಗ್ಗೆಕಾಯಿ ಹೀಗೆ ಹಲವಾರು ತರಕಾರಿ ಮತ್ತು ತೆಂಗಿನ ತುರಿಗಳನ್ನು ಸೇರಿಸಿದ ಮಾಡಿದ ದೋಸೆಗಳಿಂದ ಪರಿಸರದಲ್ಲಿ ಸುಹಾಸನೆ ಹರಡುತ್ತಿರುತ್ತದೆ. ಜೋನಿ ಬೆಲ್ಲಕ್ಕೆ ಮನೆಯಲ್ಲಿ ಸಿದ್ಧಪಡಿಸಿದ ಘಟ್ಟಿ ತುಪ್ಪವನ್ನು ಸೇರಿಸಿದ ಮಿಶ್ರಣದಲ್ಲಿ ದೋಸೆ ಚೂರುಗಳನ್ನು ಅದ್ದಿ ಬಾಯಿಗೆ ಸೇರಿಸಿದರೆ ಕೊಂಕಣಿಗನಾಗಿ ಹುಟ್ಟಿದ್ದು ಸಾರ್ಥಕವೆನಿಸದಿರದು. ಹೊಟ್ಟೆತುಂಬ ನಾಷ್ಟಾ ಸೇವಿಸಿದ ಮೇಲೆ ಹಾಲುಬೆಲ್ಲ ಜೀರಿಗೆ ಕೊತ್ತಂಬರಿ ಸೇರಿಸಿದ ಕಶಾಯವನ್ನು ಸೇವಿಸುವದನ್ನು ಈಗಲೂ ಕಾಣಬಹುದು.

ಮಧ್ಯಾಹ್ನದ ಗಂಜಿಯೂಟಕ್ಕೆ ಇನ್ನೂ ಕೊಂಕಣಿಗರು ಪ್ರಾಶಸ್ತ್ಯ ನೀಡುತ್ತಾರೆ. ಹಾಲು, ತುಪ್ಪ ಮತ್ತು ಉಪ್ಪು ಸೇರಿಸಿದ ಕುಚ್ಚ್‌ಕ್ಕಿ ಗಂಜಿಯೂಟದ ಜೊತೆಗೆ ನೀಡುವ ಬಸಲೇ ಸೊಪ್ಪು, ಕುಂಬಳಕಾಯಿಯ ಹೂದೇಟುವಿನ ಪಲ್ಯ ಸುವರ್ಣಗಡ್ಡೆ ಬೇರುಹಲಸಿನಕಾಯಿಯೊಂದಿಗೆ ಸೇರಿಸಿದ ಅಲಸಂದೆ (ಬಗಡೊ) ಪಲ್ಯೆ, ಗಂಜಿಗೆ ಸರಿಹೊಂದುವ ವ್ಯಂಜನಗಳಾಗಿವೆ. ಅಪರೂಪಕ್ಕೆ ಒಣಮೀನಿನ, ಶಿಗಡಿ ಚಟ್ನಿಇವು ಸಿಗುವುದುಂಟು. ಸಾರಸ್ವತರು ಕೇವಲ ಹೊಟ್ಟೆ ತುಂಬಿಸಿಕೊಳ್ಳಲು ಊಟಮಾಡದೆ ವೈವಿಧ್ಯಮಯ ಪಾಕ ಪ್ರಕಾರಗಳನ್ನು ಅಳವಡಿಸಿಕೊಂಡು ಇದನ್ನು ಸುಂದರ ಕಲೆಯಾಗಿ ಬೆಳೆಸಿಕೊಂಡಿದ್ದಾರೆ. ಬಾಯಿರುಚಿಯೂ ಇದರೊಂದಿಗೆ ಸೇರಿಸಿಕೊಂಡಿದ್ದರಿಂದ ಕೊಂಕಣಿ ಮಹಿಳೆಯೆ ಹೆಚ್ಚಿನ ಶ್ರಮವಹಿಸಬೇಕಾಗುತ್ತದೆ. ಸಾರಸ್ವತರು ಉತ್ತರ ಭಾರತದಿಂದ ಗೋವಾಕ್ಕೆ ವಲಸೆ ಬಂದರು. ನಂತರ ಮಹಾರಾಷ್ಟ್ರ ಮತ್ತು ದಕ್ಷಿಣ ರಾಜ್ಯದಲ್ಲಿ ನೆಲೆನಿಂತರು. ಆದ್ದರಿಂದ ಇವರು ಯಾವುದೇ ಬಗೆಯ ತಿನಿಸುಗಳನ್ನು ತಯಾರಿಸಬಲ್ಲರು. ಇಂದು ಕೊಂಕಣಿಗರ ಮನೆಗಳಲ್ಲಾಗಲಿ ಹೋಟೆಲುಗಳಲ್ಲಾಗಲಿ ಉತ್ತರ ಮತ್ತು ದಕ್ಷಿಣ ಭಾರತದ ಪಕ್ವಾನ್ನಗಳ ಸವಿಯನ್ನು ಸವಿಯಲು ಸಾಧ್ಯ.

ಪಾಯಸಗಳ ವೈವಿಧ್ಯವು ಸಾಕಷ್ಟಿದೆ. ಮಾವಿನ ಹಣ್ಣು, ಬಾಳೆಹಣ್ಣು ಚಿಬ್ಬಡಗಳ ''ಹಶಾಳೆ'' ಸೌತೆಕಾಯಿ, ಸಿಹಿ ಕುಂಬಳಕಾಯಿ ಹೆರಕಲಣ್ಣು ಅಕ್ಕಿ ತೆರಿಗೆ ಸೇರಿಸಿ ಹಲಸಿನ ಎಲೆಯೊಳಗೆ ಸೇರಿಸಿ ''ತೌಸಳಿ'' ಮತ್ತು ''ಪಾತೋಳಿ''ಗಳು ಹಲಸಿನ ಮರದ ಎಲೆಗಳಲ್ಲಿ ಸಿದ್ಧಪಡಿಸಿದ ಹಿಟ್ಟುಗಳು, ಮೆಣಸಿನ ಚಟ್ನಿ ಕಾಯಿತುರಿ ಎಣ್ಣೆ ಮತ್ತು ಸಿಹಿರೋಸ್‌ಗಳಿಂದ ಬಾಯಿರುಚಿ.

ಸಮಯಕ್ಕೆ ಸರಿಯಾಗಿ ಕಿರಾಣಿ ಸಾಮಾನು ತರಕಾರಿ ವದಗದಿದ್ದರೆ ಕೊಂಕಣಿ ಗೃಹಿಣಿಯರು ಅಳುಕದೇ ಸಂಗ್ರಹಿಸಿದ ವಸ್ತುಗಳಲ್ಲೆ ವಾರಗಟ್ಟಲೆ ಅಡಿಗೆಯನ್ನು ಸಾಗಿಸುತ್ತಾರೆ.

ಕೊಂಕಣಿಗರು ಮಾಂಸಹಾರಿಗಳೆಂದು ಇತರರು ಮೂಗು ಮುರಿದರೂ ಮೂಲತಃ ಅವರು ಮಲ್ಲಾಹಾರಿಗಳು ಮಾತ್ರ. ಶನಿವಾರ, ಸೋಮವಾರ ಹಬ್ಬಹರಿದಿನಗಳಂದು ಅದು ನಿಷಿದ್ಧ. ಈಗಲೂ ಕೆಲವು ಮನೆಗಳಲ್ಲಿ ಮೀನು ಹೆಚ್ಚುವ ಈಳಿಗೆ, ಪಾತ್ರೆ, ಹೆಂಚು, ಸೌಟು ಒಲೆಗಳು ಪ್ರತ್ಯೇಕವಾಗಿವೆ. ಮೀನಿನ ಪದಾರ್ಥಗಳನ್ನು ಸಹ ತರಕಾರಿಗಳೊಂದಿಗೆ ಹಿತಮಿತವಾಗಿ ಸೇವಿಸುತ್ತಾರೆ. ಸಮುದ್ರ, ನದಿ ಮತ್ತು ಕೆರೆಗಳಲ್ಲಿಯ ಮತ್ಸ್ಯಹಾರಗಳಿಗೆ ಸರಿಹೊಂದುವ ಮಸಾಲೆಗಳನ್ನು ಅದಕ್ಕೆ ಸರಿಹೊಂದುವ ತರಕಾರಿ ವ್ಯಂಜನಗಳನ್ನು ಸಿದ್ಧಪಡಿಸುವುದರಲ್ಲಿ ಕೊಂಕಣಿ ಗೃಹಿಣಿಯರು ಪರಿಣಿತರು.

ದೀಪಾವಳಿಗೆ ಮದ್ದು, ಗುಂಡು ಹಾರಿಸಿ ದೀಪ ಬೆಳಗಿಸಿ ತುಳಸಿಯ ಲಗ್ನ ನೆರವೇರಿಸಿದೆವೆಂದರೆ ವರ್ಷದ ಮೊದಲ ಚಟುವಟಿಕೆಗಳು ಪ್ರಾರಂಭವಾದಂತೆ. ವರ್ಷಾದ್ಯಂತ ಬರುವ ವಿವಿಧ ಹಬ್ಬಗಳಿಗೆ ತಲೆತಲಾಂತರಗಳಿಂದ ಅನುಸರಿಸಿಕೊಂಡು ಬಂದ ಪದ್ಧತಿಯಂತೆ ಆಶಾಢದ್ವಾದಶಿಗೆ ಹಲಸಿನ ಎಲೆಗಳಲ್ಲಿ ಮಾಡಿದ ಹಿಟ್ಟುಗಳನ್ನು ನಾಗರಪಂಚಮಿಗೆ ಅರಸಿನ ಎಲೆಗಳ ಪಾತೋಳಿಗಳನ್ನು ನೂಲು ಹುಣ್ಣಿಮೆಗೆ 'ಶ್ಯಾವಿಗೆ'ಗಳನ್ನು ಮಾಡಿದರೆ ಕೃಷ್ಣಾಷ್ಟಮಿಗೆ ಚೌತಿ ಮತ್ತು ದಸರಾಗಳಿಗೆ ಹತ್ತು ಹದಿನೆಂಟು ಬಗೆಯ ತಿನಿಸುಗಳನ್ನು ತಯಾರಿಸುತ್ತಾರೆ. ದೀಪಾವಳಿ ಮತ್ತು ಯುಗಾದಿ ಹೋಳಿಗೆ ತಿನ್ನುವ ಸಮಯ. ಸಂಕ್ರಾಂತಿಗೆ 'ಖಿಚಡಿ' ಮತ್ತು ಎಳ್ಳಿನ ಲಡ್ಡುಗಳು ಹಾಗೂ ತಿಳಿಗುಳನ್ನು ತಯಾರಿಸುತ್ತಾರೆ.

ತಿಳಿಸಾರು, ಸಾಂಬಾರುಗಳನ್ನು ಪ್ರತಿದಿನ ಊಟಮಾಡಿ ಬೇಜಾರಾದಾಗ ಕೊಂಕಣಿಗಳ ಮನೆಗೆ ದಾಳಿ ಇಟ್ಟರೆ ಕಂಡು-ಕೇಳರಿಯದ ವಿಶಿಷ್ಟರುಚಿಯ ಊಟ ಸಿಗುವುದು ಖಂಡಿತ. ಶಾಶ್ವತವಾಗಿ ಇಂತಹ ಊಟ ಬೇಕೆಂದರೆ ಪಾಕಪ್ರವೀಣೆಯಾದ ಕೊಂಕಣಿ ಕನ್ಯೆಯರನ್ನು ಮನೆ ತುಂಬಿಸಿ ಕೊಳ್ಳುವುದು ಅನಿವಾರ್ಯ !



ಗೌಡಸಾರಸ್ವತ ಬ್ರಾಹ್ಮಣರಲ್ಲಿ ಕುಟುಂಬ ವ್ಯವಸ್ಥೆ ಇಂದಿಗೂ ಬಲಿಷ್ಠವಾಗಿದೆ. ಕುಟುಂಬದ ಕಿರಿಯ ಸದಸ್ಯರು ಹಿರಿಯ ಸದಸ್ಯನಿಗೆ ವಿಧೇಯರಾಗಿರುತ್ತಾರೆ. ಆತನು ಕುಟುಂಬದ ಪ್ರತಿಷ್ಠೆಯ ರಕ್ಷಣೆಗಾಗಿ ಸದಾ ಜಾಗೃತನಾಗಿರುತ್ತಾನೆ. ಪ್ರತಿಯೊಂದು ಕುಟುಂಬವೂ ಸ್ವಯಂಪ್ರೇರಿತ ಸಾಮಾಜಿಕ ನಿಯಂತ್ರಣಕ್ಕೆ ಒಳಪಟ್ಟಿದೆ.



# ರಾಜಕೀಯ ಮತ್ತು ನಾವು

ಭಾರತದಂತಹ ಪ್ರಜಾಪ್ರಭುತ್ವವಾದಿ ರಾಷ್ಟ್ರಕ್ಕೆ ರಾಜಕಾರಣವೆಂಬುದು ಆತ್ಮವಿದ್ದಂತೆ. ಹೀಗಿರುವಾಗ ಸಾರಸ್ವತ ಬ್ರಾಹ್ಮಣ ಸಮಾಜವು ರಾಜಕೀಯ ಚಟುವಟಿಕೆಗಳಿಂದ ಹೊರತಾಗಿ ಬದುಕುವುದು ಕಷ್ಟಸಾಧ್ಯ. ನಮಗೇಕೆ ಈ ರಾಜಕೀಯ? ಎನ್ನುವವರಿಗೆ ವಾಸ್ತವದ ಅರಿವಿಲ್ಲ. ರಾಜಕೀಯ ಶಕ್ತಿಯೇ ಪ್ರಧಾನವಾಗಿರುವ ಇಂದಿನ ದಿನಗಳಲ್ಲಿ ರಾಜಕೀಯ ತಾಟಸ್ಥ್ಯ, ನಮ್ಮ ಅಭಿವೃದ್ಧಿಗೆ ನಾವು ಸಂಚಕಾರ ತಂದುಕೊಂಡಂತೆಯೇ !

ಸಾರಸ್ವತರಿಗೆ ರಾಜಕೀಯ ಹೊಸದಲ್ಲ. ಅದು ಅವರ ಬುದ್ದಿಮತ್ತೆಗೆ ಸಂದ ಗೌರವವಾಗಿದೆ. ಹಿಂದೆ ವ್ಯಾಪಾರಕ್ಕಾಗಿ ಅರಬ ರಾಷ್ಟ್ರಕ್ಕೆ ಹೋದ ನಮ್ಮವರು ಅಲ್ಲಿಯೆ ಸ್ಥಾನಿಕರಾಗಿ ಅಧಿಕಾರ ನಡಸಿದ್ದು ಇರುತ್ತದೆ. ಒಂದು ದಾಖಲೆಯ ಪ್ರಕಾರ ಮೆಕ್ಕಾದಲ್ಲಿ ಮುಕ್ತೇಶ್ವರ ಎಂಬ ಹೆಸರಿನ ಸಾರಸ್ವತ ಬ್ರಾಹ್ಮಣ ರಾಜನಾಗಿ ರಾಜ್ಯವಾಳಿದ್ದಾನೆ ಎಂದರೆ ಆಶ್ಚರ್ಯವಲ್ಲವೇ? ಕೆಳದಿ ಸಾಮ್ರಾಜ್ಯದಲ್ಲಿ ನಮ್ಮ ಅನೇಕರು ರಾಜಕೀಯ ಕ್ಷೇತ್ರದಲ್ಲಿ ಇದ್ದರು ದಾಮರಸ ಪೈ ಎನ್ನುವವರು ಹೊನ್ನಾವರದಲ್ಲಿ ಗವರ್ನರ ಆಗಿದ್ದರು. ಲಕ್ಷ್ಮೀಕಾಂತ ಶೆಣೈ ಎನ್ನುವ ನಮ್ಮ ಜಿಲ್ಲೆಯ ವ್ಯಾಪಾರಿ ಬ್ರಿಟೀಷ ಮತ್ತು ಸೋಂದಾ ಅರಸರ ಮಧ್ಯೆ ಸಂಧಾನಕಾರನಾಗಿ ಚಾಣಾಕ್ಷತನದಿಂದ ಅನೇಕ ಸಮಸ್ಯೆಗಳನ್ನು ಪರಿಹರಿಸಿದ್ದು ಇತಿಹಾಸ ಪುಟಗಳಲ್ಲಿ ಕಂಡುಬರುತ್ತದೆ.

ಕುಮಟಾದ ಗಣೇಶ ಮಹಾಲೆಯವರ ಮೊಮ್ಮಗ ರಾಮಚಂದ್ರ ಮಹಾಲೆ ಎನ್ನುವವರು ಕೆಳದಿಯ ಭದ್ರಪ್ಪನಾಯಕನ ಆಡಳಿತದಲ್ಲಿ 1631 ರಿಂದ 1664 ರ ವರೆಗೆ ಮಂತ್ರಿಯಾಗಿದ್ದ. ನಾರಾಯಣ ಮಹಾಲೆ ಎನ್ನುವವರು ಭದ್ರಪ್ಪನಾಯಕನ ಆಸ್ಥಾನದ ರಾಯಭಾರಿ ಆಗಿದ್ದನಲ್ಲದೇ, ಭದ್ರಪ್ಪನಾಯಕನ ನಿಧನದ ನಂತರ ಅವರ ಕುಟುಂಬದಲ್ಲಾದ ಅಂತಃಕಲಹವನ್ನು ಶಾಂತಗೊಳಿಸಿ ಅವರ ನಿರ್ದೇಶನದಲ್ಲಿಯೇ ಮುಂದಿನ ರಾಜ್ಯಭಾರ ನಡೆಯಿತು ಎನ್ನುವುದಕ್ಕೆ ದಾಖಲೆಗಳಿವೆ. ವಿಠ್ಠಲಮಲ್ಯ ಮತ್ತು ನಾರಾಯಣ ಪ್ರಭು ಎನ್ನುವವರು ಗೋವಾದಲ್ಲಿ ರಾಯಭಾರಿ ಆಗಿದ್ದರು. ಯಲ್ಲಾಪುರದಲ್ಲಿ ''ಮಂತ್ರಿ'' ಎಂಬ ಉಪನಾಮೆಯನ್ನು ಹೊಂದಿದ ಗೌಡಸಾರಸ್ವತರು ಇಂದಿಗೂ ಇದ್ದಾರೆ. ಇವರ ಪೂರ್ವಿಕರು ಸೋಂದ ಸಂಸ್ಥಾನದಲ್ಲಿ ಮಂತ್ರಿಗಳಾಗಿದ್ದರು. ವಿಜಯನಗರ ಸಾಮ್ರಾಜ್ಯ, ಗೋವಾ ಮತ್ತು ತುಳುನಾಡುಗಳ ಆಸ್ಥಾನದಲ್ಲಿ ಸಾರಸ್ವತ ಬ್ರಾಹ್ಮಣರ ಪ್ರಭಾವ ಹೆಚ್ಚಾಗಿತ್ತು.

ಕಾಲ ಬದಲಾದಂತೆ ರಾಜಕೀಯ ರಂಗ ಸ್ವಾರ್ಥ ಸಾಧನೆಯ ವೇದಿಕೆಯಾಯಿತು. ಕೇವಲ ಭ್ರಷ್ಟಾಚಾರ ಮತ್ತು ಜಾತೀಯತೆ ತುಂಬಿದ ರಾಜಕೀಯ ನಮ್ಮ ಜನರಿಗೆ ಅಪಥ್ಯವಾಯಿತು. ಆದುದರಿಂದಲೇ ಕಳೆದ ಐವತ್ತು ವರ್ಷಗಳಲ್ಲಿ ರಾಜಕೀಯ ರಂಗದಲ್ಲಿ ನಮ್ಮ ಹಿರಿಯರು ಯುವಕರಿಗೆ ಪ್ರೋತ್ಸಾಹ ನೀಡುತ್ತಿಲ್ಲ. ಸಾರಸ್ವತರು ಪ್ರತ್ಯಕ್ಷವಾಗಿ ರಾಜಕೀಯ ರಂಗದಲ್ಲಿ ಇರದಿದ್ದರೂ, ರಾಷ್ಟ್ರದ ಹಿತಾಸಕ್ತಿ, ದೇಶಭಕ್ತಿಗೆ ಪೂರಕವಾದ ರಾಜಕೀಯ ಪಕ್ಷಗಳಿಗೆ ಒಲವು ತೋರಿದ್ದು ಸತ್ಯವಾಗಿದೆ. ರಾಜಕೀಯವನ್ನು ವೈಯಕ್ತಿಕ ಹಿತಾಸಕ್ತಿಗೆ ಬಳಸಿಕೊಂಡಿದ್ದ ಉದಾಹರಣೆಗಳು ಕಡಿಮೆ.

**ಉಳಿದೆಲ್ಲ ಕ್ಷೇತ್ರಗಳಲ್ಲಿ ಜಿ.ಎಸ್.ಬಿ. ಸಮಾಜ ರಾಜಕೀಯವಾಗಿ ಒಂದು ಶಕ್ತಿಯಾಗಿ ರೂಪಗೊಂಡಿಲ್ಲ ಎಂಬುದು ನಿಜ. ರಾಜ್ಯ ಮತ್ತು ರಾಷ್ಟ್ರ ರಾಜಕಾರಣಗಳಲ್ಲಿ ಮಾನ್ಯ ಶ್ರೀ ಆರ್. ವಿ. ದೇಶಪಾಂಡೆ, ಯೋಗೇಶ ಭಟ್ಟ, ವಿ. ಡಿ. ಹೆಗಡೆ, ಗುರುದಾಸ ಕಾಮತ, ಮನೋಹರ ಪಾರೀಕರ, ಸುರೇಶ ಪ್ರಭು, ಮೊದಲಾದ ನಾಯಕರು ಸಾಧಿಸಿದ ರಾಜಕೀಯ ಸಾಫಲ್ಯದಲ್ಲಿ ನಮ್ಮ ಸಮಾಜದ ಯೋಗದಾನಕ್ಕಿಂತ ಅವರ ವೈಯಕ್ತಿಕ ಸಾಮರ್ಥ್ಯವೇ ಹೆಚ್ಚು.**

ಪಕ್ಕದ ಜಿಲ್ಲೆಯಾದ ದಕ್ಷಿಣ ಕನ್ನಡದಲ್ಲಿ ಮಾತ್ರ ರಾಜಕೀಯ ಸಫಲತೆ ಕಂಡುಬಂದಿದೆ. ಅಲ್ಲಿನ ಜೀ. ಎಸ್. ಬಿ. ಸಮಾಜದ ಸಂಘಟನೆ ಐಕ್ಯತೆ ದಿವಂಗತ ಟಿ.ಎಮ್.ಎ.ಪೈ ಹಾಗೂ ಪ್ರಸ್ತುತ ಶಾಸಕರಾಗಿರುವ ಯೋಗೇಶ

ಭಟ್ಟರಂತಹ ರಾಜಕೀಯ ಯಶಸ್ವೀಗಷ್ಟೇ, ಸೀಮಿತವಾಗಿರದೇ ಜೀ.ಎಸ್.ಬಿ. ಸಮಾಜದ ಹಾಗೂ ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಅದು ಕಾರಣವಾಯಿತು. ಸ್ಥಳೀಯ ಮಟ್ಟದಲ್ಲಿ ಸಮಾಜದ ಅನೇಕ ಗಣ್ಯರು ನಾಯಕರಾಗಿ ರೂಪಗೊಂಡರು. ಇಂದು ದಕ್ಷಿಣ ಕನ್ನಡದಲ್ಲಿರುವ ಪ್ರತಿಷ್ಠಿತ ವೈದ್ಯಕೀಯ ಮತ್ತು ತಾಂತ್ರಿಕ ಕಾಲೇಜುಗಳಾಗಲಿ, ಯಶಸ್ವೀ ಉದ್ದಿಮೆಗಳಾಗಲಿ, ಹೈಟೆಕ್ ಆಸ್ಪತ್ರೆಗಳಾಗಲಿ ಇವೆಲ್ಲವುದರ ಸಾಮರ್ಥ್ಯ ಜೀ. ಎಸ್. ಬಿ. ಸಮಾಜದವರದೇ ಆಗಿದೆ. ರಾಜಕೀಯವಾಗಿ ಸಬಲರಾಗದಿದ್ದಲ್ಲಿ ಇವೆಲ್ಲ ಸಾಧನೆಗಳು ಸುಲಭ ಸಾಧ್ಯವಿರಲಿಲ್ಲ.

ಆದರೆ ಉತ್ತರ ಕನ್ನಡದಲ್ಲಿ ರಾಜಕೀಯ ಕ್ಷೇತ್ರ ನಮಗೆ ನಿರಾಶಾದಾಯಕವಾಗಿದೆ. ಇಲ್ಲಿ ನಾವು ಅಲ್ಪ ಸಂಖ್ಯಾತರಾಗಿದ್ದರೂ ಸಹ ಅದೇ ವರದಾನವಾದಾಗಬಲ್ಲದು. ಆದರೆ ಬಲವಾದ ಸಂಘಟನೆ, ಏಕತೆ ಹಾಗೂ ನಿಖರ ನಿರ್ದೇಶನದ ಅವಶ್ಯಕತೆಗಳಿವೆ. ಪ್ರತಿಯೊಂದು ತಾಲೂಕು, ಗ್ರಾಮಗಳಲ್ಲಿ ವಾಸಿಸಿರುವ ನಮ್ಮ ಸಮಾಜದ ಜನಸಂಖ್ಯೆಯ ಖಾಸಗೀ ಪರವೇಕ್ಷಣೆಯನ್ನು ನಡೆಸಿ ನಮ್ಮ ನಿಖರವಾದ ಶಕ್ತಿಯನ್ನು ನಾವು ಕಂಡುಕೊಳ್ಳಬೇಕಾಗಿದೆ.

ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಎಲ್ಲಾ ರಾಜಕೀಯ ಪಕ್ಷಗಳು ಒಂದೇ ರೀತಿ ಕಾಣುತ್ತವೆ. ದೇಶಭಕ್ತಿ, ಭ್ರಷ್ಟಾಚಾರ ನಿರ್ಮೂಲನೆ ಕೇವಲ ಭಾಷಣಕ್ಕೆ ಉಪಯೋಗಿಸುವ ಶಬ್ದಗಳಾಗಿವೆ. ಜಾತಿಯತೆಯೇ ಪ್ರಧಾನವಾಗಿದೆ. ಪ್ರತಿಯೊಬ್ಬ ರಾಜಕೀಯ ನಾಯಕರು ಅವರವರ ಸಮಾಜವನ್ನು ಉದ್ಧಾರಗೊಳಿಸುವಲ್ಲಿ ಆಸಕ್ತಿಯನ್ನು ಹೊಂದಿದ್ದಾರೆ. ಇಂತಹ ವಾತಾವರಣದಲ್ಲಿ ನಿರ್ಣಾಯಕ ಮತಗಳಿಲ್ಲದ ನಾವು ಅನಾಥ ಪ್ರಜ್ಞೆಯನ್ನು ಹೊಂದಿದ್ದೇವೆ. ರಾಜಕೀಯದಲ್ಲಿ ನೇರವಾಗಿ ಧುಮುಕಲು ಹಿಂಜರಿಯುತ್ತಿರುವ ನಾವು ನಮ್ಮ ಅಪಾರ ಪರಿಶ್ರಮ, ಬುದ್ಧಿಶಕ್ತಿ ಮತ್ತು ಧನ ಸಹಾಯದಿಂದ ಅನ್ಯ ಸಮಾಜದವರನ್ನು ನಾಯಕರನ್ನಾಗಿ ರೂಪಿಸುತ್ತಿದ್ದೇವೆ. ಇಂದು ನಮ್ಮನ್ನು ಕೇಳುವವರೇ ಇಲ್ಲ.

ದೇಶಕ್ಕೆ ಹಿತವನ್ನು ಹಾಗೂ ಗೌರವವನ್ನು ತಂದು ಕೊಡುವ ಯಾವುದೇ ರಾಜಕೀಯ ಪಕ್ಷಕ್ಕೆ ಒಲವು ತೋರಿಸುವುದು ಜೊತೆಗೆ ರಾಜ್ಯ ಜಿಲ್ಲಾ ಹಾಗೂ ತಾಲೂಕಾಮಟ್ಟದಲ್ಲಿ ನಮ್ಮ ಸಮಾಜದ ಚಾರಿತ್ರ್ಯವಂತ ಅಭ್ಯರ್ಥಿಗಳು ಆರಿಸುವ ಸಾಧ್ಯತೆಗಳಿದ್ದಲ್ಲಿ ಸಮಾಜದ ಹಿತದೃಷ್ಟಿಯಿಂದ ಅವರು ಗೆದ್ದು ಬರುವಂತೆ ಪ್ರಯತ್ನಿಸುವುದು ಇಂದಿನ ಅವಶ್ಯಕತೆಯಾಗಿದೆ.

## ಕೊಂಕಣಿ ಗೌಡ ಸಾರಸ್ವತರ ವೆಬ್ ಸೈಟ್ ನಿರ್ಮಾಣ

ಕೊಂಕಣಿ, ಕನ್ನಡ ಹಾಗೂ ಇಂಗ್ಲೀಷಿನ ಖ್ಯಾತ ಲೇಖಕರಾದ ಶ್ರೀ ಕೆ. ಜಿ. ಮಲ್ಯರ ಹಿರಿತನದಲ್ಲಿ ಜಿ. ಎಸ್. ಬಿ. ಕೊಂಕಣಿ ಎಂಬ ವೆಬ್ ಸೈಟಿನ ನಿರ್ಮಾಣವಾಗಿ ಬ್ಯಾಂಕ್ ಆಫ್ ಬರೋಡಾದ ಚೇರಮನ್ ಹಾಗೂ ಮೆನೇಜಿಂಗ್ ಡೈರೆಕ್ಟರ್ ಶ್ರೀ ಪಿ. ಎಸ್. ಶೆಣೈ ಅವರಿಂದ ನವೆಂಬರ ದಿನಾಂಕ 22ರಂದು ಮುಂಬಯಿಯಲ್ಲಿ ಉದ್ಘಾಟನೆಗೊಂಡು www.gsbkonkani.net ಎಂಬ ಹೆಸರಿನಲ್ಲಿ ಜಗತ್ತಿನಾದ್ಯಂತ ಇಂಟರ್‌ನೆಟ್ ಸೌಲಭ್ಯದ ಮೂಲಕ ವೀಕ್ಷಿಸಬಹುದಾಗಿದೆ.

ಈ 'ಸೈಟು' 100 ಪುಟಗಳನ್ನು ಮಿಕ್ಕಿದ್ದು ಗೌಡ ಸಾರಸ್ವತರ ಚರಿತ್ರೆ, ಹಾಗೂ ಸಂಸ್ಕೃತಿ, ಧರ್ಮ ಗ್ರಂಥಗಳು, ಗಾಯತ್ರೀಮಂತ್ರ ಧಾರ್ಮಿಕ ವಿಧಿ ವಿಧಾನಗಳು, ಮಠ, ಮಂದಿರ, ಧರ್ಮಗುರುಗಳು ಕೊಂಕಣಿ ಭಾಷೆ ಹಾಗೂ ಹಬ್ಬ ಹರಿದಿನಗಳ ಪರಿಚಯ ಇದರಲ್ಲಿದೆ.

# ಕೊಂಕಣಿ ಭಾಷೆಯ ಮೂಲ ಮತ್ತು ಅಭಿವೃದ್ಧಿ

ಸರಸ್ವತಿ ನದಿ ತೀರದಲ್ಲಿ ವೇದೋಪನಿಷತ್ತು ಪಾರಂಗತರಾಗಿ ನೇಮ ನಿಷ್ಟೆಗಳಿಂದ ವಾಸಿಸುತ್ತಿದ್ದ ಸಾರಸ್ವತ ಬ್ರಾಹ್ಮಣರಿಗೆ ಕುಲತಿಲಕನಾದವನು ಪರಶುರಾಮ. ಆತನ ಸೃಷ್ಟಿಯಲ್ಲಿಯೇ ಸುಂದರವಾದ ಗೋಮಾಂತಕವನ್ನಾರಿಸಿ ಈತನು ಮಾಹಾಯಾಗವನ್ನು ಕೈಗೊಂಡನು. ಪ್ರಾರಂಭದಲ್ಲಿ ಇಷ್ಟಾರ್ಥ ಸಿದ್ಧಿಯನ್ನು ಪಡೆಯದೇ ಹತಾಷನಾಗಿ ನಂತರ ಗೌಡಸಾರಸ್ವತ ಬ್ರಾಹ್ಮಣರನ್ನು ಕರೆಸಿಕೊಂಡು ಮತ್ತೊಮ್ಮೆ ಮಹಾಯಾಗವನ್ನು ಕೈಗೊಂಡು ಕೃಥಾರ್ತನಾದನು. ಪರಶುರಾಮನ ತಾಯಿ ರೇಣುಕಾದೇವಿಯ ಇನ್ನೊಂದು ಹೆಸರು ''ಕೊಂಕಣಾದೇವಿ'' ಆದುದರಿಂದಲೇ ಪರಶುರಾಮನನ್ನು ನಮ್ಮ ಪೂರ್ವಜರು ''ಕೊಂಕಣೋ'' ಎಂದು ಕರೆಯುತ್ತಿದ್ದರು. ಪರಶುರಾಮ ಸೃಷ್ಟಿಸಿದ್ದ ಪ್ರದೇಶವನ್ನು ಕೊಂಕಣಪಟ್ಟಿ ಎನ್ನುವರು. ಮಹಾರಾಷ್ಟ್ರದ ಠಾಣಾ, ರತ್ನಾಗಿರಿ, ಸಾವಂತವಾಡಿ ಜಿಲ್ಲೆಗಳು ಸಂಪೂರ್ಣ ಗೋವಾ ರಾಜ್ಯ ಕಾರವಾರದಿಂದ ಭಟ್ಕಳ, ಹಳಿಯಾಳ, ಸೂಪಾ, ಯಲ್ಲಾಪುರ, ಶಿರಶಿ ತಾಲ್ಲೂಕುಗಳು ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೇರಳದ ಕೊಚ್ಚಿ ತನಕದ ಪ್ರದೇಶವು ಕೊಂಕಣ ಪಟ್ಟಿಯಲ್ಲಿ ಬರುತ್ತದೆ. ಸ್ವತಃ ಪರಶುರಾಮನು ನಿರ್ಮಾಣಮಾಡಿದ ಮತ್ತು ತದನಂತರ ನಮ್ಮ ಪೂರ್ವಜರಿಂದ ರಕ್ಷಿಸಿಕೊಂಡು ಬಂದ ಭಾಷೆಯೇ ಕೊಂಕಣಿ ಭಾಷೆ ಎಂದು ನಂಬಿಕೆ ಇದೆ.

ಕೊಂಕಣ ಒಂದು ಪುರಾತನವಾದ ಮತ್ತು ಸಂಸ್ಕೃತದಿಂದ ಉತ್ಪನ್ನವಾದ ಪ್ರಾಕೃತ ಭಾಷೆ ಕ್ರಿ.ಪೂ 500-600 ರಲ್ಲಿದ್ದ ಭರತ ಮುನಿಯ ಉಲ್ಲೇಖದ ಪ್ರಕಾರ ಏಳು ಪ್ರಾಕೃತ ಭಾಷೆಗಳಿದ್ದವು. 1) ಮಾಗಧಿ 2) ಆವಂತಿ 3) ಪ್ರಾಚ್ಯಾ 4) ಶೌರಸೇನಿ 5) ಅರ್ಧಮಾಘದಿ 6) ಬಾಹರಿಕಾ 7) ದಕ್ಷಿಣಾತ್ಯ ಪ್ರಾಕೃತ ಎಂಬುದೆ ನಮ್ಮ ಕೊಂಕಣಿ ಭಾಷೆ.

ಕೊಂಕಣಿಯು ಮರಾಠಿಯ ಉಪಭಾಷೆ ಇರಬಹುದು ಎಂದು ಕೆಲವರ ವಾದವಾಗಿತ್ತು . ಇದು ಸತ್ಯಕ್ಕೆ ದೂರವಾಗಿದೆ. ಕೊಂಕಣಿಯು ಮರಾಠಿಗಿಂತ ಮುಂಚಿನ ಒಂದು ಸ್ವತಂತ್ರ ಭಾಷೆ ಎಂದು ಹಲವಾರು ದಾಖಲೆಗಳಿಂದ ಸಿದ್ದವಾಗಿದೆ. ಕೊಂಕಣಿಯಲ್ಲಿ ಕಂಡುಬರುವ ಹಲವಾರು ಸಂಸ್ಕೃತ ಮತ್ತು ಪ್ರಾಕೃತ ಶಬ್ದಗಳ ಶೇಕಡಾವಾರು ಪ್ರಮಾಣ ಮರಾಠಿ ಭಾಷೆಗಿಂತ ಅಧಿಕವಾಗಿದೆ. ಕೊಂಕಣಿ ಭಾಷೆಯಲ್ಲಿ ಬರುವ ಎಷ್ಟೋ ಶಬ್ದಗಳು ಗುಜರಾತಿ ಭಾಷೆಯಲ್ಲಿವೆ. ಆದರೆ ಅವು ಮರಾಠಿಯಲ್ಲಿಲ್ಲ. ಕೊಂಕಣಿ ಭಾಷೆ ಪ್ರೌಢಾವಸ್ಥೆ ತಲುಪಿದಾಗಲೂ ಮರಾಠಿ ಹುಟ್ಟಬಂದಿರಲಿಲ್ಲವೆಂದು ಇತಿಹಾಸ ಸಾರಿ ಹೇಳುತ್ತದೆ. ಕ್ರಿ.ಶ. 1187 ರ ಉತ್ತರ ಕೊಂಕಣದ ಶಾಸನ ಕೊಂಕಣಿಯಲ್ಲಿ ಬರೆಯಲಾಗಿದೆ. 14 ನೇಯ ಶತಕಕ್ಕಿಂತ ಹಿಂದಿನ ಸಂಸ್ಕೃತ ಹಸ್ತ ಪ್ರತಿಗಳು ಈ ಭಾಗದಲ್ಲಿ ಸಿಗುವುದು ದುರ್ಲಬ. ಸಂತ ಜ್ಞಾನೇಶ್ವರನು ಕ್ರಿ.ಶ.1209 ರಲ್ಲಿ ''ಜ್ಞಾನೇಶ್ವರಿ'' ಗ್ರಂಥ ರಚಿಸಲು ಅಂದು ಅತ್ಯಧಿಕವಾಗಿ ಪ್ರಚಲಿತವಿದ್ದ ಕೊಂಕಣಿಗೇ ಶರಣು ಹೋಗಬೇಕಾಯಿತು. ಶ್ರವಣಬೆಳಗೊಳದ ಗೋಮ್ಮಟೇಶ್ವರನ ಪಾದದಡಿಯಲ್ಲಿ ''ಚಾಮುಂಡರಾಯನ ಕೊರವಿಲ್ಲೆ'' ಎಂದು ಬರೆದಿದ್ದು ಇದು ಕೊಂಕಣಿಯ ಪ್ರಾಚೀನತೆ ಸೂಚಿಸುವಂತಿದೆ ಎಂದು ಖ್ಯಾತ ಅಂಕಣಕಾರ ಶ್ರೀ ಎಮ್.ವಿ.ಕಾಮತ್ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕ್ರಿ.ಶ.1556 ರಲ್ಲಿ ದೇಶದ ಮೊಟ್ಟಮೊದಲ ಮುದ್ರಣಾಲಯವು ಗೋವಾದಲ್ಲೆ ಸ್ಥಾಪಿತವಾಗಿ ಅಲ್ಲಿ ಮುದ್ರಿತ ಮೊದಲ ಪುಸ್ತಕ ಕೊಂಕಣಿ ಭಾಷೆಯದು. ಇದು ಭಾರತದ ಪ್ರಥಮ ವ್ಯಾಕರಣ ಪುಸ್ತಕವಾಗಿದೆ. 1987ರಲ್ಲಿ ಕೊಂಕಣಿ ಗೋವಾದ ರಾಜ್ಯ ಭಾಷೆಯಾಯಿತು. 1976ರಲ್ಲಿ ಡಾ॥ ಸುನಿತ್ ಕುಮಾರ್ ಚಟರ್ಜಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಕೊಂಕಣಿ ಅಕಾಡೆಮಿಯ ಮಾನ್ಯತೆ ಪಡೆಯಿತು. ಮಹಾಜನ್ ಆಯೋಗದ ಜಸ್ಟಿಸ್ ಮಹಾಜನ ಇವರು ಕೊಂಕಣಿ ಒಂದು ಸ್ವತಂತ್ರ ಭಾಷೆ ಎಂದು ತೀರ್ಪಿತ್ತಿದ್ದಾರೆ. 1992 ರಲ್ಲಿ ಸಂವಿಧಾನದ ಎಂಟನೇ ಪರಿಚ್ಛೇದದಲ್ಲಿ ಕೊಂಕಣಿ ಸೇರ್ಪಡಿಸಿದ್ದುದಲ್ಲದೇ ಕರ್ನಾಟಕದಲ್ಲಿ ಕೊಂಕಣಿ ಅಕಾಡೆಮಿ ಅಸ್ಥಿತ್ವಕ್ಕೆ ಬಂದಿದೆ.

ವಲಸೆ ಬಂದ ಕೊಂಕಣಿಗರು ಹೊಸದರಲ್ಲಿ ಬ್ರಾಹ್ಮಿ ಲಿಪಿ ಬಳಸಿದರು ಕಾಲಕ್ರಮೇಣ ಸ್ಥಾನಿಯರು ಬಳಸುತ್ತಿದ್ದ ದೇವನಾಗಿರಿ ಲಿಪಿ ಉಪಯೋಗಿಸಿ ತಮ್ಮ ಭಾಷೆ ಇನ್ನಿತರರಿಗೂ ಅರ್ಥವಾಗುವಂತೆ ನೋಡಿಕೊಂಡರು. ಗೋವಾದಲ್ಲಿ ಸ್ಥಾಯಿಯಾಗಿ ಬೇರುಬಿಟ್ಟ ಕೊಂಕಣಿಗರು ಸಾಹಿತ್ಯಿಕ ಕೃತಿಗಳ ರಚನೆಯಲ್ಲಿ ತೊಡಗಿದರಲ್ಲದೇ ಲೇಖನ ಮತ್ತು ವಾಚನದಲ್ಲಿ ಏಕರೂಪತೆಯನ್ನು ತರುವುದಕ್ಕಾಗಿ ವ್ಯಾಕರಣವನ್ನು ಸೃಷ್ಟಿಸಿದರು. ಆದರೆ ನಂತರ ಬಂದ ಪೋರ್ಚುಗೀಸರು ಗೋವೆಯನ್ನು ಆಕ್ರಮಿಸಿ ತಮ್ಮ ಭಾಷೆಯನ್ನು ಕಡ್ಡಾಯವಾಗಿ ಹೇರಿದರಲ್ಲದೇ ಲಭ್ಯವಿದ್ದ ಸಕಲ ಕೊಂಕಣಿ ಸಾಹಿತ್ಯವನ್ನು ಕ್ರಿ.ಶ. 1548 ರಲ್ಲಿ ಸುಟ್ಟು ಬೂದಿಮಾಡಿದರು. ನಮ್ಮ ಸಂಸ್ಕೃತಿಯನ್ನು ಪ್ರತಿನಿಧಿಸುವ ಅಮೂಲ್ಯ ಸಾಹಿತ್ಯವನ್ನು ಕಳೆದುಕೊಂಡ ಕೊಂಕಣಿಗರು ಪೋರ್ಚುಗೀಸರ ಬಲಾತ್ಕಾರದ ಮತಾಂತರವನ್ನು ತಪ್ಪಿಸಿಕೊಳ್ಳುವ ಸಲುವಾಗಿ ಮಹಾರಾಷ್ಟ್ರ, ಕರ್ನಾಟಕ, ಕೇರಳಕ್ಕೆ ವಲಸೆಹೋಗಬೇಕಾಯಿತು. ಇದರಿಂದ ಕೊಂಕಣಿ ಪ್ರಾದೇಶಿಕ ಭಾಷೆಗಳ ವರ್ಚಸ್ಸಿಗೆ ಮಣಿಯಲೇಬೇಕಾಯಿತು. ಮಹಾರಾಷ್ಟ್ರದಲ್ಲಿ ಮರಾಠಿಯನ್ನು, ಉತ್ತರ ಮತ್ತು ದಕ್ಷಿಣಕನ್ನಡದಲ್ಲಿ ಮತ್ತು ಕೇರಳದಲ್ಲಿ ಮಳಯಾಳಿ ಶಬ್ದಗಳನ್ನು ಅವರು ಸ್ವಾಗತಿಸಿದರು. ಪೋರ್ಚುಗೀಸರು ಮತಾಂತರಕ್ಕೆ ಅನುಕೂಲವಾಗಲು ಕ್ರಿಶ್ಚಿಯನ್ ಸಾಹಿತ್ಯಗಳನ್ನು ಕೊಂಕಣಿಯಲ್ಲಿ ರಚಿಸಿದರು. ಈ ಮುನ್ನ ಅವರು ಸಾಹಿತ್ಯಕ್ಕಾಗಿ ರೋಮನ ಲಿಪಿಯನ್ನು ಬಳಸುತ್ತಿದ್ದರು.

ಇಂದಿನ ಬಹುರೂಪಿ ಕೊಂಕಣಿಯ ದರ್ಶನ ಪಡೆಯಲು ಪಶ್ಚಿಮ ಕರಾವಳಿಯ ಪರ್ಯಟನೆ ಕೈಗೊಳ್ಳಬೇಕು. ಮುಂಬೈಯಲ್ಲಿ ಅದನ್ನು ಮರಾಠಿದಾಟಿಯಲ್ಲಿ ಮಾತನಾಡಿದರೆ, ಕೊಂಕಣದಲ್ಲಿ ರಾಗವೆಳೆದು ಶಬ್ದಗಳನ್ನು ಉಚ್ಚರಿಸುವರು. ಗೋವಾ ಹಿಂದುಗಳು ಪೋರ್ಚಗೀಸ್ ಶಬ್ದಗಳನ್ನು ಯಥೇಚ್ಛವಾಗಿ ಬಳಸಿದರೆ ಕ್ರಿಶ್ಚಿಯನ್‌ರು ಪೋರ್ಚುಗಿಸ್ ಉಪಭಾಷೆ ಎಂಬಂತೆ ಕೊಂಕಣಿಯನ್ನು ಬಳಸುವರು. ಉತ್ತರ ಕನ್ನಡ ಜಿಲ್ಲೆಯ ಕಾರವಾರ ಅಂಕೋಲಾಗಳಲ್ಲಿ ಶಬ್ದಗಳನ್ನು ಎಳೆದೆಳೆದು ಮಾತನಾಡಿದರೆ, ಕುಮಟಾ ಮತ್ತು ಹೊನ್ನಾವರಗಳಲ್ಲಿ ಒತ್ತಕ್ಷರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಸೇರಿಸುವರು. ಭಟ್ಕಳದ ನವಾಯಿತರು ಮಾತನಾಡುವ ಪರ್ಶಿಯನ್ ಮಿಶ್ರಿತ ಕೊಂಕಣಿ ಕೇಳಲು ಇಂಪಾಗಿರುತ್ತದೆ. ದಕ್ಷಿಣ ಕನ್ನಡದವರು ಕೊಂಕಣಿ, ತುಳು, ಕನ್ನಡ ಶಬ್ದಗಳೆಂಬ ಭೇದ ಭಾವ ಕಲ್ಪಿಸದೇ ವ್ಯವಹಾರದಲ್ಲಿ ಉಪಯೋಗಿಸುತ್ತಾರೆ. ಯಲ್ಲಾಪೂರ ಮತ್ತು ಹಳಿಯಾಳ ತಾಲ್ಲೂಕುಗಳಲ್ಲಿ ವಾಸಮಾಡಿರುವ ಸಿದ್ದಿ, ಕುಣಬಿ ಮತ್ತು ಕೊಂಕಣ ಮರಾಠಾ ಜನಾಂಗೀಯರು ವಿಶಿಷ್ಟ ಶೈಲಿಯ ಕೊಂಕಣಿ ಮಾತನ್ನಾಡುತ್ತಾರೆ.

ಕೊಂಕಣಿ ಭಾಷೆ ಬರವಣಿಗೆಗಾಗಿ ಕನ್ನಡ, ದೇವನಾಗಿರಿ, ರೋಮನ್, ಅರೇಬಿಕ್, ಮಳಿಯಾಳಿ ಲಿಪಿಗಳನ್ನು ಬಳಸುವ ಕೊಂಕಣಿಗರು ತಾವು ವಿಶ್ವ ಕುಟುಂಬಿಗಳೆಂದು ಸಿದ್ದಮಾಡಿದ್ದಾರೆ. ರತ್ನಾಗಿರಿ ಜಿಲ್ಲೆಯಲ್ಲಿ ಕೊಂಕಣಿ ಭಾಷೆಯನ್ನು ''ಚಿತ್ಪಾವನಿ'' ಎಂದೂ ಕೊಂಕಣದಲ್ಲಿ ''ಮಾಲ್ವಾಣಿ'' ಎಂದು ಗೋವೆಯವರು ''ಗೊಮಾಂತಕಿ'' ಎಂದು ಕರೆಯುತ್ತಾರೆ. ಶ್ರೀರಂಗಪಟ್ಟಣ, ಮೈಸೂರು, ಕೊಡಗುಗಳಲ್ಲಿ ಮುಸ್ಲಿಮರಾಗಿ ಮತಾಂತರಗೊಂಡ ಕರಾವಳಿಯ ಕ್ರಿಶ್ಚಿಯನ್ನರು ಉರ್ದು ಮಿಶ್ರಿತ ಕೊಂಕಣಿ ಮಾತನ್ನಾಡುತ್ತಾರೆ.

ಭಾರತಾದ್ಯಂತ ಹರಡಿರುವ ಸಾರಸ್ವತ ಬಂಧುಗಳು ನಮ್ಮ ಮಾತೃಭಾಷೆಯಾದ ಕೊಂಕಣಿಯ ಅಭಿವೃದ್ಧಿಗಾಗಿ ಸೇವೆ ಸಲ್ಲಿಸಲು ಮುಂದೆಬರಬೇಕಾಗಿದೆ. ಮೂಲತಃ ಸಾರಸ್ವತ ಬ್ರಾಹ್ಮಣರ ಭಾಷೆ ಇದಾಗಿದ್ದರೂ ಕರಾವಳಿಯಲ್ಲಿ ಬೀಡುಬಿಟ್ಟ ಸೊನ್ನಾರ್, ಸೇರುಗಾರ್, ಮೆಸ್ತ್ರಿ ಸುತಾರ್, ವಾಣಿ, ದೇವಳಿ, ಸಿದ್ಧಿ, ಗಾಬೀತ್‌ರು ತಮ್ಮ ಭಾಷೆಯನ್ನಾಗಿ ಬಳಸುತ್ತಾರೆ. ಸಂಸ್ಕೃತದಿಂದ ಬಂದ ಈ ಭಾಷೆಗೆ ದೇವನಾಗಿರಿಯಲ್ಲಿ ಬರೆಯುವಷ್ಟು ಸುಲಭವಾಗಿ ಬೇರೆ ಲಿಪಿಗಳಲ್ಲಿ ಬರೆಯಲಾಗುವುದಿಲ್ಲವೆಂದು ಆತ್ಮವಿಶ್ವಾಸದಿಂದ ಹೇಳಬಹುದು. ಸುಶಿಕ್ಷಿತರಿಗೆಲ್ಲ ದೇವನಾಗಿರಿ ಲಿಪಿಯ ಪರಿಚಯ ಇದ್ದೆ ಇರುವುದರಿಂದ ಈ ಲಿಪಿಯನ್ನೇ ಬಳಸಲು ಪ್ರಾರಂಭಿಸಬೇಕು. ಆಗ ಮಾತ್ರ ಕೊಂಕಣಿಗೆ ಸರ್ವರಿಂದಲೂ ಮಾನ್ಯತೆ ಸಿಕ್ಕಿತು.

# ಉತ್ತರ ಕನ್ನಡದಲ್ಲಿ ಕೊಂಕಣಿ ಸಾಹಿತ್ಯ

ನಮ್ಮ ಪಶ್ಚಿಮ ಕರಾವಳಿಯಲ್ಲಿ ಮಹಾರಾಷ್ಟ್ರದ ರತ್ನಾಗಿರಿಯಿಂದ ಗೋವಾ, ಉ.ಕ., ದ.ಕ. ಕೇರಳವರೆಗಿನ ಭೂಭಾಗ ಕೊಂಕಣ. ಗೋವಾ, ಉ.ಕ., ದ.ಕ. ಜಿಲ್ಲೆಯಲ್ಲಿ ಕೊಂಕಣಿ ಭಾಷೆ ಮಾತನಾಡುವವರು ಅನೇಕರಿದ್ದಾರೆ. ಪರಶುರಾಮನು ಸೃಷ್ಟಿಸಿದ ಸಪ್ತ ಪ್ರದೇಶಗಳಲ್ಲಿ ಕೊಂಕಣಿಯೂ ಒಂದು. ಕೊಂಕಣಿ ಭಾಷೆ ಯಾವುದೇ ಒಂದು ಧರ್ಮ ಅಥವಾ ಕುಲಕ್ಕೆ ಸೀಮಿತವಾಗಿಲ್ಲ. ಪಶ್ಚಿಮ ಕರಾವಳಿಯಲ್ಲಿ ಅದರಲ್ಲೂ ವಿಶೇಷವಾಗಿ ಗೋವಾದಲ್ಲಿ ಎಲ್ಲ ಮತಾವಲಂಬಿಗಳು ಕೊಂಕಣಿ ಮಾತನಾಡುತ್ತಾರೆ. ಕೊಂಕಣಿಗರು ಪ್ರಗತಿಪರರು, ಸಾಹಸಿಗರು, ದೇಶದ ವಿವಿಧ ಭಾಗಗಳಿಗೆ ತೆರಳಿ ಅವರು ಅಲ್ಲಿನ ಜನರ ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಜೀವನವನ್ನು ತಮ್ಮದಾಗಿಸಿಕೊಂಡಿದ್ದರಲ್ಲದೇ ರಾಷ್ಟ್ರದ ಅಭಿವೃದ್ಧಿಗಾಗಿ ಕೊಂಕಣಿಗರ ಪಾತ್ರ ಹಿರಿದು. ದೇಶದ ನಾಲ್ಕು ಹಿರಿಯ ಬ್ಯಾಂಕುಗಳು, ಅನೇಕ ಕೈಗಾರಿಕೆಗಳು, ಶೈಕ್ಷಣಿಕ, ವೈದ್ಯಕೀಯ, ಸಮಾಜ ಸೇವಾ ಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ರಾಜಕೀಯದಲ್ಲೂ ಕೊಂಕಣಿಗರು ಗೋವಾದಲ್ಲಿ ಮಾತ್ರವಲ್ಲದೇ, ಇತರೆಡೆಗೂ ಕಾಣಬರುತ್ತಾರೆ. ಇದು ಕೊಂಕಣಿಗರ ಹಿರಿಮೆಗೆ ಕೈಗನ್ನಡಿಯಾಗಿದೆ.

ಉ.ಕ. ಜಿಲ್ಲೆ ಕೊಂಕಣಿ ಸಾಹಿತ್ಯ ಸಂಘಟನೆಯ ಮೂಲ. ಅಖಿಲ ಭಾರತ ಮಟ್ಟದ ಮೊದಲನೆ ಕೊಂಕಣಿ ಪರಿಷತ್ತಿನ ಅಧಿವೇಶನ ನಡೆದದ್ದು ಕಾರವಾರದಲ್ಲಿ. ಅಂದು ಕೊಂಕಣಿ ಭಾಷಿಕರ ಸಂಘಟನೆಯ ಪಿತಾಮಹ ದಿವಂಗತ ಮಾಧವ ಮಂಜುನಾಥ ಶ್ಯಾನಭಾಗ ಕೊಂಕಣಿಯ ಕಹಳೆ ಊದಿದರು.

ಬೇರೆ ಬೇರೆ ರಾಜ್ಯಗಳಲ್ಲಿ ಹಂಚಿಹೋದ ಕೊಂಕಣಿ ಭಾಷಿಕರನ್ನು ಒಂದೆಡೆಗೆ ಸೇರಿಸಿ ಕೊಂಕಣಿ ಭಾಷೆಯ ಅಭಿವೃದ್ಧಿ ಕಾರ್ಯದ ಜೊತೆಗೆ ಭಾಷಿಕರ ಬಾಂಧವ್ಯ ಬೆಳೆಯುವಲ್ಲಿ ಕ್ರಿಯಾಶೀಲರಾದವರೆಂದರೆ ದಿ. ಮಾಧವ ಮಂಜುನಾಥ ಶ್ಯಾನಬಾಗ. ಕೊಂಕಣಿಗರಲ್ಲಿ 'ಮಾಧವಮಾಮ' ರೆಂದೇ ಪ್ರಸಿದ್ಧರಾದವರು. ಕುಮಟಾ ತಾಲ್ಲೂಕಿನ ಹೆರವಟ್ಟಾ ಮಧ್ಯಮ ಕುಟುಂಬದಲ್ಲಿ 1889 ರಲ್ಲಿ ಮಾಧವ ಮಾಮರ ಜನನವಾಯಿತು. ಮಾಧವ ಮಾವ ಕೋಟಿಗೊಬ್ಬರಲ್ಲ. ಒಂದು ಯುಗಕ್ಕೆ ಜನ್ಮ ತಾಳುವ ಮಹಾನ ಪುರುಷ. ಕೊಂಕಣಿ ಯುಗ ಪುರುಷ ಮಾಧವ ಶ್ಯಾನಭಾಗ 1939 ಜುಲೈ 8 ರಂದು ಕಾರವಾರದಲ್ಲಿ ಅಖಿಲ ಭಾರತ ಕೊಂಕಣಿ ಪರಿಷತ ಸ್ಥಾಪಿಸಿ ಮೊದಲ ಸಮ್ಮೇಳನ ಜರುಗಿಸಿ ನಾಂದಿ ಹಾಡಿದರು. ಅವರ ಕಾರ್ಯಚಟುವಟಿಕೆಗೆ ವಿಧಿಗೆ ಅಸೂಯೆಯಾಗಿರಬೇಕು. ಅಂತೆಯೇ1952 ರಲ್ಲಿ ಅವರ 63ನೇ ವಯಸ್ಸಿನಲ್ಲಿ ವಿಧಿ ಅವರನ್ನು ಸೆಳೆದುಕೊಂಡಿತು. ಹೀಗೆ ಕೊಂಕಣಿ ಚಳುವಳಿಯಿಂದ ಮಾಧವ ಮಾಮ ಕೊಂಕಣಿಗೆ ಬಳವಳಿ ನೀಡಿದ್ದು ಅಪಾರ. ಒರ್ವ ವ್ಯಕ್ತಿಯ ಆಯುಷ್ಯವು ಸಾರ್ಥಕವಾದುದನ್ನು ಅವರ ಕಾರ್ಯಗಳಿಂದ ಅಳೆಯಬೇಕು. ಕೇವಲ ಆಯುರ್ಮಾನದಿಂದಲ್ಲ. ಅಂತೆಯೇ ಮಾಧವ ಮಾಮ ಕೊಂಕಣಿಗರ ಹೃದಯದಲ್ಲಿ ಶಾಶ್ವತವಾಗಿ ನೆಲೆಸಿ ಮುಂದಿನ ಸಮ್ಮೇಳನಕ್ಕೆ ಹರಿಕಾರರಾದರು.

ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಕನ್ನಡ ಹಾಲು ಸಕ್ಕರೆಯಂತೆ ಬೆರೆತಿದೆ. ಕೊಂಕಣಿ ಕನ್ನಡ ಸಂಬಂಧ ಕೇವಲ ಲಿಪಿಗೆ ಮಾತ್ರ ಸೀಮಿತವಾಗಿಲ್ಲ. ಕೊಂಕಣಿಯ ಬಹುತೇಕ ಪದಗಳು ಸಂಸ್ಕೃತ ಪದಗಳಿಂದ ಸೇರಿದ್ದರೂ ಕನ್ನಡ ಗಾದೆಗಳು ಕೊಂಕಣಿಯಲ್ಲಿ ಸೇರಿವೆ. ಆದರೆ ಕೊಂಕಣಿಗರು ಕನ್ನಡ ಸಾಹಿತ್ಯ ಪುಷ್ಟಿಯಲ್ಲಿ ಸಿಂಹಪಾಲು ಕೊಟ್ಟು ಸಮೃದ್ಧಿ ತಂದಿದ್ದಾರೆ. ಇವರಲ್ಲಿ ಉ.ಕ.ಜಿಲ್ಲೆಯಲ್ಲಿ ಪ್ರಮುಖರಾದವರೆಂದರೆ ಗೌರೀಶ ಕಾಯ್ಕಿಣಿ,

ಯಶವಂತ ಚಿತ್ತಾರ, ದಿನಕರ ದೇಸಾಯಿ, ಜಯಂತ ಕಾಯ್ಕಿಣಿ, ವಿವೇಕ ಶ್ಯಾನಭಾಗ ಮುಂತಾದವರು. ಇವರು ಕನ್ನಡಕ್ಕೆ ಕೊಟ್ಟ ಕೊಡುಗೆಯಿಂದ ಕೊಂಕಣಿಗೆ ಆದ ನಷ್ಟ ಏನೂ ಇಲ್ಲ. 'ಏಕೆಂದರೆ ಸಂತೋಷಕುಮಾರ ಗುಲ್ವಾಡಿ ಹೇಳಿದಂತೆ '' ಒಂದು ಸಮೃದ್ಧ ಭಾಷೆ ಎಂದರೆ ರುಚಿಕರ ಊಟವಿದ್ದಂತೆ; ತಮಿಳರ ಸಾಂಬಾರ, ತೆಲುಗರ ಉಪ್ಪಿನಕಾಯಿ, ಕೊಂಕಣಿಗರ ಸುಕ್ಕೆ, ತುಳುರವರ ಕೊದ್ದಲುಗಳಿದ್ದರೇನೇ ಊಟ ಮೃಷ್ಟಾನ್ನ ''.

ಶ್ರೀ ದಿನಕರ ದೇಸಾಯಿಯವರು ತಾರುಣ್ಯದಲ್ಲಿ ಕೊಂಕಣಿಯಲ್ಲಿ ಬರೆದ ''ಮೊಗರೆ'' ಅಂದರೆ ಮಲ್ಲಿಗೆ ಎಂಬ ಕಾಲ್ಪನಿಕ ಪ್ರೇಯಸಿ ಕುರಿತು ಬರೆದ ಕೊಂಕಣಿ ಚುಟುಕುಗಳು ಸುಂದರ ಭಾವಗೀತೆಗಳಾಗಿವೆ.

ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರು ಕೊಂಕಣಿ ಸಂಸ್ಕೃತಿಯ ಅಧಿಕೃತ ವಕ್ತಾರರು ಆದ ಶ್ಯಾ. ಮಂ. ಕೃಷ್ಣರಾಯರು ಹೊರನಾಡು ಗೋವಾದಲ್ಲಿದ್ದರೂ ಕೊಂಕಣಿಯ ಸಾಂಸ್ಕೃತಿಕ ಚಳುವಳಿಯ ದಿಕ್ಕು ದೆಸೆ ರೂಪಿಸಲು ಉತ್ತರ ಕನ್ನಡದವರ ಪಾಲಿಗೆ ದಾರಿದೀಪವಾಗಿದ್ದಾರೆ. 1988 ರಲ್ಲಿ ಉತ್ತರ ಕನ್ನಡ ಜಿಲ್ಲಾ ಕೊಂಕಣಿ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಮೊದಲು ಪ್ರಯತ್ನಿಸಿದರು. ಅವರ ಸತತ ಪ್ರಯತ್ನ ಪ್ರೋತ್ಸಾಹದಿಂದ 1989 ರಲ್ಲಿ ಡಾ. ಎಲ್.ಎಚ್. ಪೈ ಅವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಸಮ್ಮೇಳನ ನಡೆಯಿತು. ಅಂದಿನಿಂದಲೂ ಶಿರಶಿಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿ ಶ್ಯಾ. ಮಂ. ಕೃಷ್ಣರಾವ್ ಅವರು ಪ್ರಕಾಶನ ಸಂಸ್ಥೆ, ಸಮ್ಮೆಳನ, ಕಾರ್ಯಾಗಾರ, ಪರಿಷತ್ ಘಟಕಗಳನ್ನು ಹುಟ್ಟು ಹಾಕುತ್ತಾ ಕೊಂಕಣಿ-ಕೊಂಕಣಿಗರ ಸಂಘಟನೆಯಲ್ಲಿ ಪೂರ್ತಿಯಾಗಿ ತೊಡಗಿಸಿಕೊಂಡಿದ್ದಾರೆ. ಉದಯೋನ್ಮುಖ ಬರಹಗಾರರ ಸೃಜನಶೀಲತೆ ಹಾಗೂ ಪ್ರತಿಭೆಗೆ ನೀರೆರೆಯುತ್ತಿದ್ದಾರೆ.

ತಮ್ಮ ಅಜ್ಜಿಯ ಮನೆಯ ಸಂಸ್ಕಾರದಿಂದ ಕೊಂಕಣಿಯಲ್ಲಿ ಬರೆಯುವಂತಾಯಿತು ಎಂದ ಶ್ರೀ ದಿನಕರ ದೇಸಾಯಿಯವರ ''ದಿನಕರಾಲಿ'' ಕವನದಲ್ಲಿ ಇದ್ದ ಒಟ್ಟೂ 26 ಕವನಗಳಲ್ಲಿ ತಾಜಾತನವಿದೆ.

ಈಗ ಬೊಂಬಾಯಿಯಲ್ಲಿ ನೆಲೆಸಿರುವ ಶ್ರೀ ನಾಗೇಶ ದತ್ತಾತ್ರೇಯ ಸೋಂದೆ ಮೂಲತಃ ಶಿರಸಿಯವರು. ದೇವನಾಗಿರಿ ಲಿಪಿಯಲ್ಲಿ ಅವರ ಅನೇಕ ಕೊಂಕಣಿ ಪುಸ್ತಕಗಳು ಪ್ರಕಟವಾಗಿವೆ. 1986 ರಲ್ಲಿ ಪ್ರಕಟವಾದ ಕೊಂಕಣಿ ಪುಸ್ತಕ ''ಪುರಂದರದಾಸ'' ಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿವೆ. ಉ.ಕ. ಜಿಲ್ಲಾ ಕೊಂಕಣಿ ಪರಿಷತ್ 1989 ರಲ್ಲಿ ಹುಟ್ಟಿಕೊಂಡು ಇಲ್ಲಿನ ಸಾಹಿತಿಕ ಚಟುವಟಿಕೆಗೆ ಬೆನ್ನೆಲುಬಾಗಿದೆ. ಜಿಲ್ಲೆಯ ಅಂತರಿಕ ಪುರಾತನವಾದ ಪಂಡಿತ ಸಾರ್ವಜನಿಕ ವಾಚನಾಲಯದಲ್ಲಿ ಕೊಂಕಣಿ ಭಾಷೆಯ ಪುಸ್ತಕಗಳ ದೊಡ್ಡ ಸಂಗ್ರಹವನ್ನೇ ಹೊಂದಿದ್ದು ಉ.ಕ.ಜಿಲ್ಲಾ ಕೊಂಕಣಿ ಪರಿಷತ್ ಕೊಂಕಣಿ ಪುಸ್ತಕ ಸಂಸ್ಕೃತಿ ಬೆಳೆಸಲು ಗಮನಾರ್ಹ ಸೇವೆ ಸಲ್ಲಿಸುತ್ತಿದೆ. ಮೊದಲನೇ ಕೊಂಕಣಿ ಅಖಿಲ ಭಾರತ ಮಟ್ಟದ ಅಧಿವೇಶನ ನಮ್ಮ ಜಿಲ್ಲೆಯಲ್ಲಿ ಆದ ನಂತರ ಕೊಂಕಣಿ ಚಟುವಟಿಕೆಗಳು ನಿಧಾನ ಗತಿಯಲ್ಲಿ ಸಾಗುವಾಗ ಉ.ಕ.ಜಿಲ್ಲಾ ಕೊಂಕಣಿ ಪರಿಷತ್ ಜಿಲ್ಲೆಯಲ್ಲಿನ ಪ್ರತಿ ತಾಲ್ಲೂಕುಗಳಲ್ಲಿ ಕೊಂಕಣಿ ಪರಿಷತ್ ಸ್ಥಾಪಿಸಿದ್ದರಿಂದ ಕಳೆದ ಫೆಬ್ರುವರಿ 11,12 ರಂದು ಅಖಿಲ ಭಾರತದ 20 ನೇ ಅಧಿವೇಶನ ಶಿರಸಿಯಲ್ಲಿ ಅದ್ದೂರಿಯಿಂದ ನಡೆಸಲು ಸಾಧ್ಯವಾಯಿತೆನ್ನುವುದು ಗಮನಾರ್ಹ. ಅಲ್ಲದೇ ಶಿರಸಿಯ ಈ ಅಧಿವೇಶನದ ಬಗ್ಗೆ ''ಕೊಂಕಣಿ ಅಂತರಾಷ್ಟ್ರೀಯ ಸೀಮೋಲ್ಲಂಘನಕ್ಕೆ ಸಿದ್ದತೆ ನಡೆಯಿತು ಎನ್ನುವ ಮೆಚ್ಚುಗೆಯನ್ನು ಉದಯವಾಣಿಯಲ್ಲಿ ಪ್ರಕಟವಾಗಿತ್ತು. 1998 ರಲ್ಲಿ ಶಿರಸಿಯಲ್ಲಿ ಜರುಗಿದ ಪ್ರಥಮ ಅಖಿಲ ಭಾರತ ಮಹಿಳಾ ಅಧಿವೇಶನ ಇದಕ್ಕೊಂದು ನಿದರ್ಶನ ಅಷ್ಟೇ.

ಕೊಂಕಣಿ ರಂಗ ಭೂಮಿಗೆ ಪರ್ಯಾಯ ಹೆಸರು ಹೊಸಾಡ ಬಾಬುಟಿ ನಾಯಕ ಇವರು ನಾಟಕ ಬರೆಯುವುದರಿಂದ ಹಿಡಿದು ರಂಗದ ಮೇಲೆ ಪ್ರದರ್ಶಿಸುವವರೆಗೂ ದಣಿವರಿಯದ ರಂಗ ಕಲಾವಿದ ಇವರ 'ಆಡಕಾತ್ರಿ ತುಲೆ ಪೊಪ್ಪಳ' ನಾಟಕಕ್ಕೆ ಟಿ.ಎಮ್.ಎ.ಪೈ ಫೌಂಡೇಶನ್ ಪ್ರಶಸ್ತಿ ದೊರಕಿದ್ದು ಕೊಂಕಣಿಗೆ ಸಂದ ಗೌರವವಾಗಿದೆ. ಕೂಡ್ಲ ಆನಂದು ಶ್ಯಾನಬಾಗ - ನಿರ್ದೇಶನದಲ್ಲಿ ಇದೇ ನಾಟಕವನ್ನು ಹೊರಾಂಗಣದಲ್ಲಿ ಚಿತ್ರಿಕರಿಸಿದ ವಿಡಿಯೋ ಕ್ಯಾಸೆಟ್ 20 ನೇ ಅಧಿವೇಶನದಲ್ಲಿ ಬಿಡುಗಡೆಗೊಳಿಸಿದಾಗ ಬಿಸಿ ದೋಸೆಯಂತೆ ಖರ್ಚಾಯಿತು. ಬಾಬುಟಿಯವರ ನಾಟಕದಲ್ಲಿನ ಪ್ರಾಸಬದ್ಧ ಮಾತುಗಾರಿಕೆ ನಮ್ಮ ಜಿಲ್ಲೆಯಲ್ಲಿ ಅಲ್ಲದೇ ಮುಂಬೈ, ಧಾರವಾಡ, ದಾವಣಗೆರೆ, ಬೆಳಗಾಂ, ಹುಬ್ಬಳ್ಳಿಗಳಲ್ಲಿಯ ಕೊಂಕಣಿ ಭಾಷಿಕರಿಗೆ ಚಕಿತಗೊಳಿಸಿದೆ. 150 ಕ್ಕೂ ಮಿಕ್ಕಿ ನಾಟಕಗಳನ್ನು ಬರೆದ ಇವರ 'ಋಣಾನುಬಂಧ' ನಾಟಕ ಕೂಡ್ಲ ಆನಂದು ಶ್ಯಾನಬಾಗ ಸ್ನೇಹ ಪಬ್ಲಿಕೇಶನ ಅಡಿಯಲ್ಲಿ ಮುದ್ರಿಸಿದ್ದಾರೆ. ಇವರ ರೇಡಿಯೋ ನಾಟಕದ ಗೊಂಚಲು ''ಜಂಜಾಟ'' ಇದೇ ಪ್ರಕಾಶನದ ಅಡಿಯಲ್ಲಿ ಒಂದೇ ಪುಸ್ತಕದಲ್ಲಿ ದೇವನಾಗಿರಿ ಮತ್ತು ಕನ್ನಡ ಲಿಪಿಯಲ್ಲಿ ಪ್ರಕಟಗೊಂಡ ಜಿಲ್ಲೆಯಲ್ಲಿ ಇದು ಮೊದಲನೇ ಪುಸ್ತಕವಾಗಿದೆ. ಆಯ್. ಎಸ್. ಬಿ.ಎನ್. ನಂಬರ ಕೂಡಾ ಈ ಪುಸ್ತಕಕ್ಕೆ ದೊರಕಿ ಗೋವಾ ಮತ್ತು ಕರ್ನಾಟಕ ಸರ್ಕಾರ ತಲಾ 200 ಪುಸ್ತಕಗಳನ್ನು ಖರೀದಿಸಿದ್ದು ಸರಕಾರಕ್ಕೆ ಕೊಂಕಣಿ ಸಾಹಿತ್ಯ ಬಗ್ಗೆ ಇರುವ ಅಭಿಮಾನ ಗುರುತಿಸುವಂತಾಗಿದೆ. ಕೂಡ್ಲ ಆನಂದು ಶ್ಯಾನಭಾಗರವರ 'ಹೋವ್ಯೊ' ಜನಪರ ಪುಸ್ತಕಕ್ಕೆ ಟಿ.ಎಮ್.ಎ.ಪೈ. ಫೌಂಡೇಶನ ಪ್ರೋತ್ಸಾಹ ಪ್ರಶಸ್ತಿಯು ಲಭಿಸಿದೆ. ಹೊನ್ನಾವರದ ವೇ. ಕೃಷ್ಣ ಶರ್ಮಾ ಹಾಗೂ ದಾಂಡೇಲಿಯ ಶ್ರೀ ಕೆ.ಎನ್.ರಾವ್. ರಚಿತ ಅನೇಕ ಭಕ್ತಿಗೀತೆಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿದೆ. ಚುಟುಕು ಬ್ರಹ್ಮ ದಿ. ದಿನಕರ ದೇಸಾಯಿಯವರಿಗೆ ಸಾಟಿಯಾಗಿ ನಿಂತವರೆಂದರೆ ಶ್ರೀ ವಿ.ಆರ್.ಶಿಬಾರೆ. ಇವರ ಚುಟುಕು ಸಂಗ್ರಹ, ಇತ್ತೀಚಿಗೆ ಕನ್ನಡ ಲಿಪಿಯಲ್ಲಿ ಪ್ರಕಾಶಿತಗೊಂಡಿದೆ. ಕುಮಟಾದ ಬ.ಪಿ. ಶಿವಾನಂದ ಶಿವರಾಮ ಕಾಮತ, ಅರುಣ ಉಭಯಕರ್, ಆಕಾಶವಾಣಿ ಕಲಾವಿದರಾಗಿ ಮೆರೆದಿದ್ದಾರೆ. ಬಾಡದ ಸೀತಾರಾಮ ನಾಯಕ ಕೊಂಕಣಿ ಸಂಸ್ಕೃತಿ ಅಭಿವೃದ್ಧಿ ಗಾಗಿ ದುಡಿದರು. ಕುಮಟಾದ 'ಕೊಂಕಣಿ ಟ್ರಸ್ಟ' ಅವರ ಶ್ರಮದ ಫಲ. ಶ್ರೀ ನಾರಾಯಣ ಕಾಗಲ, ಶೋಭಾ ರಾವ್ ಉತ್ತಮ ಕವಿಗಳು. ಕುಮಟಾದಲ್ಲಿ ಪ್ರಕಾಶಿತವಾಗುವ 'ದರ್ಶನ' ಜಿಲ್ಲೆಯಿಂದ ಪ್ರಕಟಗೊಳ್ಳುವ ಏಕೈಕ ಕೊಂಕಣ ಮಾಸ ಪತ್ರಿಕೆ. ಶಿರಸಿಯ ಧ್ಯೇಯನಿಷ್ಠ ಪತ್ರಕರ್ತ ದೈನಿಕ 15 ದಿನಕ್ಕೊಮ್ಮೆ 'ಕೊಂಕಣಿ ಸೌರಭ' ವಿಶೇಷ ಪುರವಣಿ ಪ್ರಕಟಿಸಿ ಕೊಂಕಣಿ ಸಾಹಿತ್ಯಕ್ಕೆ ಸೇವೆ ಸಲ್ಲಿಸುತ್ತಿದೆ. ಶ್ರೀ ರಾಮು ಕಿಣಿ ಇದರ ಗೌರವ ಸಂಪಾದಕರಾಗಿ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ.

ಶಿರಸಿಯ ಅನಿಲ ಪೈಯವರ ಎರಡು ನಾಟಕಗಳು ಕನ್ನಡ ಲಿಪಿಯಲ್ಲಿ ಪ್ರಕಟಗೊಂಡಿವೆ. ಶ್ರೀ ವಾಸುದೇವ ಶ್ಯಾನಭಾಗ ರೇಡಿಯೊ ಕಲಾವಿದರಾಗಿದ್ದು ಇವರ ಲಘು ನಾಟಕಗಳು ಆಕಾಶವಾಣಿಯಲ್ಲಿ ಬಿತ್ತರಗೊಂಡಿದೆ. ಅವರ ಕವನ ಸಂಕಲನ ''ಭಾವ ಸಂಗಮ '' ಕನ್ನಡ ಲಿಪಿಯಲ್ಲಿ ಪ್ರಕಟಗೊಂಡಿದೆ. ಅವರು ಈಗ ಕನ್ನಡ ಚಿತ್ರೋದ್ಯಮದಲ್ಲಿ ಸಹ ತೊಡಗಿಸಿಕೊಂಡಿದ್ದಾರೆ. ಬಂಕಿಕೊಡ್ಲದ ದಿವಂಗತ ಶಿವರಾಮ ಸ್ವಾಮಿ ರಚಿಸಿದ ಅನೇಕ ಕವನಗಳಿಗೆ ಶ್ರೀಮತಿ ಅನುರಾಧಾ ಧಾರೇಶ್ವರ ರಾಗ ಸಂಯೋಜನೆ ನೀಡಿ ಆಕಾಶವಾಣಿಯಲ್ಲಿ ಧ್ವನಿಸಿದ್ದಾರೆ. ಅಂಕೋಲೆಯ ಶ್ರೀ ಎನ್.ಬಿ.ಕಾಮತ ರಂಗ ಕೃತಿಗಳನ್ನು ರಚಿಸುವಲ್ಲಿ ಸಿದ್ಧಹಸ್ತರು. ಇವರ ಶ್ರೇಷ್ಠ ಕೃತಿ 'ಮೊಗ ಮೊಗಾರೆ' ಕನ್ನಡ ಲಿಪಿಯಲ್ಲಿ ಮುದ್ರಿತವಾಗಿದೆ.

ಹಳಿಯಾಳದ ಫಾದರ ಸುಪ್ರಿಯಾ ಕೊಂಕಣಿ ಕುರಿತು ಅಧಿಕಾರ ವಾಣಿಯಿಂದ ಮಾತನಾಡಬಲ್ಲ ಜಿಲ್ಲೆಯ ಅಧಿಕೃತ ವಕ್ತಾರ. ಇವರ 100 ಕ್ಕೂ ಹೆಚ್ಚು ಕೃತಿಗಳು ಕನ್ನಡ, ರೋಮನ್, ದೇವನಾಗಿರಿ ಲಿಪಿಯಲ್ಲಿ ಪ್ರಕಾಶಿತವಾಗಿವೆ. ಎಕ್ಕಂಬಿಯ ಜಯಶ್ರೀ ನಾಯಕ ಇವರು ಬರೆದ ಕವಿತೆಗಳು ರಾಜ್ಯದಲ್ಲಿಯ ಮಾಸಿಕಗಳಲ್ಲಿ ಪ್ರಕಟವಾಗುತ್ತಿವೆ. ಬಿಳಗಿಯ ಮೋಹನ ಬಂಡಾರಕರ ಶ್ರೇಷ್ಠ ಕಲಾವಿದ. ಕೊಂಕಣಿ ಕವಿ ಮಾಜಾಳಿಯ ಮಾಹಾಬಲೇಶ್ವರ ನೈಲ್‌ರವರ ಸಣ್ಣ ಕತೆಗಳಿಗೆ ಅಕಾಡೆಮಿ ಪ್ರಶಸ್ತಿ ದೊರಕಿದೆ. ಕಾರವರದಲ್ಲಿಯ ಕೊಂಕಣಿ ಚಿಂತಕರಾದ ಸರ್ವಶ್ರೀ ದೀಪಕ ಗಾಂವಕರ್, ಎಲ್.ವಿ.ಆಂದ್ರಾಜಿ, ಆಶಾ ಪಾಲನಕರ್, ಪುರುಶೋತ್ತಮ ದೇಸಾಯಿ, ಕಾರವಾರದಲ್ಲಿ ಕೊಂಕಣಿ ಸಾಹಿತ್ಯ ಸಮ್ಮೇಳನ ನಡೆಸಿ ಕೊಂಕಣಿಗರನ್ನು ಹುರಿದುಂಬಿಸಿದ್ದಾರೆ. ಬಿಳಗಿಯ ಪದ್ಮಾಕರ ಮಡಗಾಂಕರ ಮತ್ತು ಉದಯೋನ್ಮುಕ, ಬರಹಗಾರರಾದ ಅಂಕೋಲೆಯ ಅಜಿತ ಪ್ರಭು ಸಾಹಿತ್ಯದಲ್ಲಿ ಮಿಂಚುತ್ತಿದ್ದಾರೆ. ಶಿರಸಿಯ ಮಹಾವಿಷ್ಣು ಕಲಾಮಂಡಳ ಪ್ರತಿ ವರ್ಷ ಜರಗುವ ಅಖಿಲ ಭಾರತ ಕೊಂಕಣಿ ನಾಟಕ ಸ್ಪರ್ಧೆಗೆ ತಂಡವನ್ನು ಒಯ್ಯುತ್ತಿದೆ. 1993 ರಲ್ಲಿ ಈ ಮಂಡಲಕ್ಕೆ ಒಂದು ಪ್ರಶಸ್ತಿ ಲಭಿಸಿದೆ. ಶಿರಸಿಯ ಮತ್ತು ಹೊನ್ನಾವರದ ಕ್ರೈಸ್ತ ಯುವಕರು 1977 ರಿಂದಲೂ ಕೊಂಕಣಿ ನಾಟಕ ಪ್ರದರ್ಶನ ನೀಡುತ್ತಾ ಬಂದಿದೆ. ಕೊಂಕಣಿಯನ್ನು ಜೀವಂತವನ್ನಾಗಿರಿಸಿದ ಹೆಚ್ಚುಗಾರಿಕೆ ಕ್ರಿಶ್ಚಿಯನ್ನರಿಗೆ ಸಲ್ಲಬೇಕು.

ಇತ್ತೀಚಿನ ದಿನಗಳಲ್ಲಿ ಕೊಂಕಣಿ ಸಾಹಿತ್ಯವನ್ನು ವಿದೇಶಗಳಿಗೂ ಹಂಚುವ ಪ್ರಯತ್ನ ನಡೆದಿದೆ. ಅಮೇರಿಕೆಯ ಕಾರ್ನೆಲ್ ಹಾಗೂ ಪೋರ್ಚುಗಲ್‌ನ ಲೆಸ್ಸನ್ ವಿಶ್ವವಿದ್ಯಾಲಯದಲ್ಲಿ ಕೊಂಕಣಿಯ ಅಧ್ಯಯನ ಪ್ರಾರಂಭವಾಗಿ ಕೆಲವೇ ವರ್ಷಗಳು ಕಳೆದವು. ಅದರ ಬೆನ್ನು ಹಿಂದೆಯೇ ಮಂಗಳೂರಿನಲ್ಲಿ ಪ್ರಪ್ರಥಮ ಕೊಂಕಣಿ ವಿಶ್ವ ಸಮ್ಮೇಳನ ಬಸ್ತಿ ವಾಮನ್ ಶೆಣೈ ಸಂಚಾಲಕತ್ವದಲ್ಲಿ ನಡೆಯಿತು. ಇದೊಂದು ಯೋಗವೇ ಸರಿ. ಶ್ರೀ ಎರಿಕ್ ವರ್ಘಾರಿಯೋ ಭೌಂಡಿ, ಪ್ರಾರಂಭಿಸಿ 18000.ಮೀ. ಗೂ ಮಿಕ್ಕಿ ದಾರಿಯನ್ನು ಪರಿಕ್ರಮಿಸಿ ಕೊಂಕಣಿಯ ಸಂದೇಶ ಬೀರಿದರು. ಅದ್ದೂರಿಯಿಂದ ಡಿಸೆಂಬರ 22 ರಿಂದ 26 ರ ತನಕ ನಡೆದ ವಿಶ್ವ ಕೊಂಕಣಿ ಸಮ್ಮೇಳನ ಕೊಂಕಣಿ ಬಹುಶ್ರೂತರ ಭಾಷೆಯಾಗಲು ಪೂರಕವಾಗಿದೆ. ಕೊಂಕಣಿ ಎಂದರೆ ಕರ್ಪೂರವಿದ್ದಂತೆ ಸಮಾಜದಲ್ಲಿ ಕೊಂಕಣಿ ಭಾಷಿಕರಷ್ಟು ಬೇಗ ಯಾರೂ ಬೆರೆಯುವುದಿಲ್ಲ. ಈಗ ಈ ಕರ್ಪೂರದ ಡಬ್ಬಿಯಲ್ಲಿ ಕರ್ಪೂರ ಕಡಿಮೆ ಇದ್ದರೂ ಅದರ ಪರಿಮಳ ಮಾಸಿಲ್ಲ. ಈ ಕೊಂಕಣಿ ವಿಶ್ವ ಸಮ್ಮೇಳನ ಕೊಂಕಣಿ ಕರ್ಪೂರದ ಡಬ್ಬಿ ತುಂಬಿಸಿ ಕೊಂಕಣಿ ಕಂಪು ಪಸರಿಸಿತು. ದೇಶ ವಿದೇಶಗಳಲ್ಲಿ ಹರಡಿರುವ ಕೊಂಕಣಿ ಅಕಾಡೆಮಿ ರಚಿಸುವುದಕ್ಕೆ ಈ ವಿಶ್ವ ಕೊಂಕಣಿ ಸಮ್ಮೇಳನ ನಾಂದಿ ಆಗಲೆಂದು ಆಶಿಸೋಣ.



## ಕೊಂಕಣಿಯ ಕೆಲವು ಮುಖ್ಯ ಘಟನಾವಳಿಗಳು :

1. 20-8-1992ರಲ್ಲಿ ಕೊಂಕಣಿ ಭಾಷೆ ಸಂವಿಧಾನದ 8 ನೇ ಪರಿಚ್ಛೇದದಲ್ಲಿ ಸೇರ್ಪಡೆ ಮತ್ತು ಎಲ್ಲ ನೋಟಿನ ಮೇಲೆ ಕೊಂಕಣಿಯಿಂದ (ದೇವನಾಗರಿ ಲಿಪಿ) ಅದರ ಮೌಲ್ಯ ನಮೂದನೆ.
2. 1995ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಾದ ಮಾನ್ಯತೆ.
3. ಕರ್ನಾಟಕ ಗೆಜೆಟಿಯರ್‌ನಲ್ಲಿ ಕೊಂಕಣಿ ಲೇಖಕ ಮತ್ತು ಹಿರಿಯರ ಉಲ್ಲೇಖದ ಬಂದು ಕೊಂಕಣಿ ಪುರವಣಿ ಪ್ರಾಪ್ತಿ.
4. ಕೊಂಕಣಿ ಭಾಷಿಕರು ನಡೆಸುವ ಶಿಕ್ಷಣ ಸಂಸ್ಥೆಯಲ್ಲಿ (ಮಣಿಪಾಲ್) ಕೊಂಕಣಿ ಭಾಷಿಕರಿಗೆ ಇಂಜನೀಯರ್ ಶಿಕ್ಷಣಕ್ಕೆ 20% ಮೀಸಲಾತಿ.
5. ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಸ್ಥಾಪನೆ ಮತ್ತು ಆಯ್ದ ಕೊಂಕಣಿ ಪುಸ್ತಕ ಮುದ್ರಿಸಲು 40% ಅನುದಾನ.
6. ಯು.ಪಿ.ಎಸ್.ಸಿ. ಯಂತಹ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕೊಂಕಣಿಯಿಂದ ಉತ್ತರಿಸಲು ಅವಕಾಶ.
7. ಸಂವಿಧಾನದ 350 ಎ 29.30 ವಿಧಿ ಪ್ರಕಾರ ಯಾವುದೇ ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆಯ 15% ಒಂದೇ ಭಾಷೆ ಮಾತನಾಡುವವರಿದ್ದರೆ ಆ ಜಿಲ್ಲೆ ಆ ಭಾಷೆಯ ಅಲ್ಪ ಸಂಖ್ಯಾತ ಜಿಲ್ಲೆಯೊಂದು ಘೋಷಿಸಲು ಅವಕಾಶ. ಇದರಿಂದ ಪ್ರಾಥಮಿಕ ಶಾಲೆಯಲ್ಲಿ ಕಲಿಯಲು ಅವಕಾಶ. 1981ರ ಗಣತಿಯ ಪ್ರಕಾರ ನಮ್ಮ ಜಿಲ್ಲೆಯಲ್ಲಿ 33% ಕೊಂಕಣಿ ಭಾಷೀಕರಿದ್ದು ಈ ಕುರಿತು ಸರಕಾರದ ಮೇಲೆ ಸಂಘಟಿತರಾಗಿ ಒತ್ತಾಯ ತರುವುದು ಅವಶ್ಯ.
8. 1998 ರಿಂದ 2 ವರ್ಷದ ಸ್ನಾತಕೋತ್ತರ ಕೊಂಕಣಿ ಡಿಪ್ಲೋಮಾ ಕಲಿಸಲು ಮಂಗಳೂರಿನ ಸೆಂಟ್ ಅಲೋಸಿಸ್ ಕಾಲೇಜಿನಲ್ಲಿ ಪ್ರಾರಂಭ. ನಮ್ಮ ಜಿಲ್ಲೆಯಲ್ಲಿ ಪ್ರಥಮ ಬ್ಯಾಚಿನಲ್ಲಿ 7ನೇ ಹಾಗೂ 9ನೇ ರ್‍ಯಾಂಕ್ ಲಭಿಸಿವೆ.

---

## ಇಂಗ್ಲೀಷರ ರಾಜ್ಯಭಾರದಲ್ಲಿ ಆಯ್.ಸಿ.ಎಸ್. ಪಡೆದವರಲ್ಲಿ ಇವರು ಮೊದಲಿಗರು.

1. ಶ್ರೀ ಗೋವಿಂದರಾವ್ ದೀನಾನಾಥ ಮಡ್ಗಾಂಕರ್, ಬಿ.ಎ.ಆಯ್.ಸಿ.ಎಸ್. ಇವರು ನ್ಯಾಯ ಮೂರ್ತಿಗಳಾಗಿದ್ದರು.
2. ನ್ಯಾಯಮೂರ್ತಿ ಪಿಂಬಕ್ರೊರ್ತೆ ಪಾಂಡುರಂಗರಾವ್ ಬಿ.ಎ. ಬಾರ್ ಆ್ಯಟ್ ಲಾ ಆಯ್.ಸಿ.ಎಸ್. 19 ಡಿಸೆಂಬರ 1904 ರಿಂದ ಮದ್ರಾಸ್ ಹೈ ಕೊರ್ಟನಲ್ಲಿ ನ್ಯಾಯಾಧೀಶರಾಗಿದ್ದರು. 30 ಎಪ್ರಿಲ್ 1947ನಲ್ಲಿ ನಿಧನ ಹೊಂದಿದರು.
3. ಬೆನಗಲ್ ನರಸಿಂಹರಾವ್ ಕೆ.ಟಿ., ಜಿ.ಆಯ್.ಇ. ಬಿ. ಎ. (ಕಾಂಟ್ಯಾಬ್) ಆಯ್.ಸಿ.ಎಸ್.
4. ಬೆನಗಲ್ ರಾಮ್‌ರಾವ್ ಕೆ.ಟಿ., ಸಿ.ಆಯ್.ಇ. ಎಂ. ಎ. (ಕಾಂಟ್ಯಾಬ್), ಆಯ್.ಸಿ.ಎಸ್.
5. ದತ್ತಾತ್ರೆಯ ವಾಮನ್ ರೇಗೆ ಬಿ.ಎ., ಬಿ.ಕಾಮ್., ಬಾರ್ ಆ್ಯಟ್ ಲಾ ಆಯ್.ಸಿ.ಎಸ್.
6. ಶ್ರೀ ವಿ. ಎನ್. ಕುಡೋ ಸಿ.ಆಯ್.ಎಫ್. ಎಂ.ಎ. (ಕಾಂಟ್ಯಾಬ್) ರ್‍ಯಾಂಗ್ಲರ್ ಆಯ್.ಸಿ.ಎಸ್.
7. 1922ರಲ್ಲಿಸೆಂಟ್ರಲ್ ಗವರ್ನಮೆಂಟ್ ಬೋರ್ಡ ಆಫ್ ರೆವೆನ್ಯೂನಲ್ಲಿ ಅಧಿಕಾರಿಯಾಗಿದ್ದರು.
8. ಯಶವಂತ ನಾರಾಯಣ ಸುಟನ್‌ಕರ್. ಸಿ.ಆಯ್.ಇ. ಎಂ. ಎ., ಎಲ್.ಎಲ್.ಬಿ., ಬಾರ್ ಆ್ಯಟ್ ಲಾ ಆಯ್.ಸಿ.ಎಸ್. 1911ರಲ್ಲಿ ಮಿನಿಷ್ಟರಿ ಆಫ್ ಟ್ರಾನ್ಸಪೋಟದಲ್ಲಿ ಸೆಕ್ರೆಟರಿಯಾಗಿದ್ದರು.
9. ರಾಜಾರಾಮ ಶ್ರೀಪಾದ ಬಾವಡೇಕರ ಬಿ.ಎ., ಬಿ.ಕಾಮ್., ರ್‍ಯಾಂಗ್ಲರ್, ಆಯ್.ಸಿ.ಎಸ್. 1913 ರಲ್ಲಿ ಮುಂಬಯಿ ಹೈ ಕೋರ್ಟನಲ್ಲಿ ನ್ಯಾಯಾಧೀಶರಾಗಿದ್ದರು.
9. ಗಣಪತರಾವ್ ಸಕಾರಾಮ ರಾಜ್ಯಾಧ್ಯಕ್ಷ ಎಂ.ಎ. (ಕಾಂಟ್ಯಾಬ್) ಬಾರ್ ಆ್ಯಟ್ ಲಾ ಆಯ್.ಸಿ.ಎಸ್.
10. ವಾಸುದೇವ ಸುಬ್ರಾವ್ ಹೆಜಮಾಡಿ ಬಿ.ಎ., ಬಿ.ಕಾಮ್. ಆ್ಯಂಡ್ ಟಂಕ್ಯಾಬ್, ರ್‍ಯಾಂಗ್ಲರ್ ಆಯ್.ಸಿ.ಎಸ್. 1913ರಲ್ಲಿ ಕೇಂದ್ರ ಸರಕಾರದ ಬೋರ್ಡ ಆಫ್ ರೆವಿನ್ಯೂದಲ್ಲಿ ಅಧಿಕಾರಿಗಳಾಗಿದ್ದರು.
11. ಶ್ರೀಯುತ ದತ್ತಾರಾಮ ವಾಮನ್ ಕೆರೆಕರ್ ಜಿ.ಎ., (ಬಾಮ್) ಕಂಟ್ಯಾಬ್, ರ್‍ಯಾಂಗ್ಲರ್ ಆಯ್.ಸಿ.ಎಸ್. 1914ರಲ್ಲಿ ವಾಯಿಸ್ ಪ್ರಿನ್ಸಿಪಾಲ ಪರಶುರಾಮ ಬಾವು ಕಾಲೇಜ ಪುಣಾದಲ್ಲಿ.
12. ಎ. ವಿಠ್ಠಲ ಪೈ ಒ.ಬಿ.ಇ., ಯು.ಆಯ್.ಇ., ಆಯ್.ಸಿ.ಎಸ್. ಆಯ್. ಡಿಸೆಂಬರ್ 1914ರಲ್ಲಿ ಪ್ರಧಾನಮಂತ್ರಿಯವರ ಕಾರ್ಯದರ್ಶಿ ಆಗಿದ್ದರು.
13. ಎನ್. ಡಿ. ಕೃಷ್ಣರಾವ್ ಆಯ್.ಸಿ.ಎಸ್. 30 ಆಕ್ಟೋಬರ್ 1927ರಲ್ಲಿ ಮದ್ರಾಸ್‌ನಲ್ಲಿ ಸೆಸ್ತನ್ ನ್ಯಾಯಾಧೀಶರಾಗಿದ್ದರು.
14. ಶ್ರೀಧರ ಶಿವರಾಮ ಹಟ್ಟಿಂಗಡಿ ಬಿ.ಎ.ಆಯ್.ಸಿ.ಎಸ್. 1 ನವೆಂಬರ 1927ರಲ್ಲಿ ಪೂರ್ವ ಬಂಗಾಲ ಪ್ರಾಂತ್ಯ ಜಿಲ್ಲಾ ನ್ಯಾಯಾಧೀಶರಾಗಿದ್ದರು.
15. ಹುಂಡಿ ಶ್ರೀನಿವಾಸ ಕಾಮತ್ ಸಿ.ಆಯ್.ಇ. ಬಿ.ಎ. (ಮಾಡರ್ನ್ಸ) ಆಯ್.ಸಿ.ಎಸ್. 16 ನವೆಂಬರ 1927ರಲ್ಲಿ ನಾಗಪೂರದಲ್ಲಿ ಕಮೀಶನರಾಗಿದ್ದರು.
16. ಪುರುಷೋತ್ತಮ್ ಮಂಗೇಶ್ ಲಾಡ್ ಬಿ. ಎ. (ಬಾಮ್) ಎಂ. ಎ. ಕಂಟ್ಯಾಬ್ ಬಾರ್ ಆ್ಯಟ್ ಲಾ ಆಯ್.ಸಿ.ಎಸ್.

# ಕೊಂಕಣಿ ಭಾಷಿಕರ ಸಂಘಟನೆಯ ಪಿತಾಮಹ

*ದಿ: ಮಾಧವ ಮಂಜುನಾಥ ಶಾನಭಾಗ*

ಉತ್ತರ ಕನ್ನಡ ಜಿಲ್ಲೆ ಕೊಂಕಣಿಯ ಮೂಲ. ಅಖಿಲ ಭಾರತ ಮಟ್ಟದ ಮೊದಲನೆ ಕೊಂಕಣಿ ಪರಿಷತ್ತಿನ ಅಧಿವೇಶನ ನಡೆದದ್ದು ಕಾರವಾರದಲ್ಲಿ. ಅಂದು ಕೊಂಕಣಿ ಭಾಷಿಗರ ಸಂಘಟನೆಯ ಪಿತಾಮಹ ದಿವಂಗತ ಮಾಧವ ಶಾನಭಾಗ ಕೊಂಕಣಿಯ ಕಹಳೆ ಊದಿದರು.

ಬೇರೆ ಬೇರೆ ರಾಜ್ಯಗಳಲ್ಲಿ, ಹಂಚಿ ಹೋದ ಕೊಂಕಣಿ ಭಾಷಿಕರನ್ನು ಒಂದೆಡೆಗೆ ಸೇರಿಸಿ ತನ್ಮೂಲಕ ಕೊಂಕಣಿ ಭಾಷೆಯ ಅಭಿವೃದ್ಧಿ ಕಾರ್ಯದ ಜೊತೆಗೆ ಭಾಷಿಕರ ಬಾಂಧವ್ಯ ಬೆಸೆಯುವಲ್ಲಿ ಕ್ರೀಯಾಶೀಲರಾದವರಿಂದರೆ ದಿ. ಮಾಧವ ಮಂಜುನಾಥ ಶಾನಭಾಗ. ಕೊಂಕಣಿಗರಲ್ಲಿ 'ಮಾಧವಮಾಮ' ರೇಂದೇ ಪ್ರಸಿದ್ಧಿರಾದವರು. ಕುಮಟಾ ತಾಲೂಕಿನ ಹೆರವಟ್ಟಾ ಮಧ್ಯಮ ಕುಟುಂಬದ ಒಂದರಲ್ಲಿ 1889ರಲ್ಲಿ ಮಾಧವ ಮಾಮರ ಜನನವಾಯಿತು. ಬಾಲ್ಯದಲ್ಲಿತಂದೆ ಕಳೆದುಕೊಂಡು, ಗೋಕರ್ಣದಲ್ಲಿನ ಸೋದರಮಾಮ ಸಾಂತಪ್ಪ ಪೈ ರಲ್ಲಿ ಆಶ್ರಯ ಪಡೆದುಕೊಂಡರು. ಪ್ರಾಥಮಿಕ ಶಿಕ್ಷಣ ಅಲ್ಲಿಯೇ ಮುಗಿಸಿದ ಇವರು ಪುಣೆಯ ಫರ್ಗ್ಯುಸನ್ ಕಾಲೇಜಿನಿಂದ ಪದವಿ ಪಡೆದುಕೊಂಡು ನಂತರ ಖ್ಯಾತ ಇತಿಹಾಸಕಾರರಾದ ಆರ್. ಜಿ. ಭಂಡಾರಿಯವರ ಮಾರ್ಗದರ್ಶನದಲ್ಲಿ ರೀಡರ್ ಆದರು. ಅನ್ಯಾಯವನ್ನು ಸಹಿಸದ ಇವರು ಕುಮಟಾದ ಗಿಬ್ ಹೈಸ್ಕೂಲ್ ಉಪಾಧ್ಯಾಯ ಕೆಲಸಕ್ಕೆ ರಾಜಿನಾಮೆ ನೀಡಿ, ಸವಾಲಾಗಿ ಕಾನೂನು ಪದವಿ ಹಾಗೂ ಸ್ನಾತಕೋತ್ತರ ಪದವಿ ಪಡೆದುಕೊಂಡರು. ಹೀಗೆ ಅವರು ಕಾರವಾರದಲ್ಲಿ ನ್ಯಾಯವಾದಿ ವೃತ್ತಿ ಆರಂಭಿಸಿದರು. ಬಿಡಿಗಾಸನ್ನು ಪಡೆಯದೆ ಬಡವರ ವಕಾಲತ್ತು ವಹಿಸಿದ ಮಾಧವ ಮಾಮಾರನ್ನು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ದೇಶಪ್ರೇಮಿ ಮಾಧವಮಾಮ ಸ್ವಾತಂತ್ರ್ಯ ಚಳುವಳಿಯಲ್ಲಿ ಹೊಕ್ಕರು. ಮದ್ಯಪಾನ ನಿಷೇಧ ಸಮಿತಿಯಲ್ಲಿ ಸಕ್ರಿಯ ಕಾರ್ಯಕರ್ತರಾಗಿದ್ದರಲ್ಲದೇ ಸಿಂಡಿಕೇಟ್ ಬ್ಯಾಂಕಿಗೆ ಕೆಲಕಾಲ ನಿರ್ದೇಶಕರೂ ಆಗಿದ್ದರು. ಕೊಂಕಣಿ ಭಾಷಿಕರ ಸಂಘಟನೆಗಾಗಿ ವೇದಿಕೆ ಸಜ್ಜುಗೊಳಿಸುವದು ಅತ್ಯಂತ ಕಷ್ಟಕರವಾದ ಕಾಲದಲ್ಲಿ ಅವರು ಅನ್ಯ ಭಾಷಿಕರ ಅನೇಕ ಟೀಕಾಸ್ತ್ರಗಳನ್ನು ಸವಾಲಾಗಿ ಸ್ವೀಕರಿಸಿ, ಕೊಂಕಣಿ ಬಗ್ಗೆ ಮಮಕಾರ ಮೂಡಿಸಲು ದೀಕ್ಷೆ ತೊಟ್ಟರು. ಕೊಂಕಣಿ ಕಹಳೆ ಮೊಳಗಿಸಿ ಮಂಪರಿನಲ್ಲಿದ್ದ ಭಾಷಿಕರನ್ನು ಎಚ್ಚರಿಸಿ ಭಾಷೆಯ ಎಳ್ಗೆಗಾಗಿ ಪಣತೊಟ್ಟರು. ಮಾಧವಮಾಮ ಕೋಟಿಗೊಬ್ಬನಲ್ಲ. ಒಂದು ಯುಗಕ್ಕೆ ಜನ್ಮ ತಾಳುವ ಮಹಾನ್ ಪುರುಷ. ಕೊಂಕಣಿ ಯುಗಪುರುಷ, ಮಾಧವ ಶಾನಭಾಗ 1939 ಜುಲೈ 8 ರಂದು ಕಾರವಾರದಲ್ಲಿ ಅಖಿಲ ಭಾರತ ಕೊಂಕಣಿ ಪರಿಷತ್ ಸ್ಥಾಪಿಸಿ ಮೊದಲ ಸಮ್ಮೇಲನ ಜರುಗಿಸಿ ನಾಂದಿ ಹಾಡಿದರು. ಅವರ ಕಾರ್ಯ ಚಟುವಟಿಕೆಗೆ ವಿಧಿಗೆ ಅಸೂಯೆ ಆಗಿರಬೇಕು. ಅಂತೆಯೇ 1952ರಲ್ಲಿ ಅವರ 63ನೇ ವಯಸ್ಸಿನಲ್ಲಿ ವಿಧಿ ಅವರನ್ನು ಸೆಳೆದುಕೊಂಡರು. ಹೀಗೆ ಕೊಂಕಣಿ ಚಳುವಳಿಯಿಂದ ಮಾಧವ ಮಾಮ ಕೊಂಕಣಿಗೆ ಬಳುವಳಿ ನೀಡಿದ್ದು ಅಪಾರ. ಓರ್ವ ವ್ಯಕ್ತಿಯ ಆಯುಷ್ಯವು ಸಾರ್ಥಕವಾದುದನ್ನು ಅವರ ಕಾರ್ಯಗಳಿಂದ ಅಳೆಯಬೇಕು. ಕೇವಲ ಆಯುರ್ಮಾನದಿಂದಲ್ಲ. ಅಂತೆಯೇ ಮಾಧವಮಾಮ ಕೊಂಕಣಿಗರ ಹೃದಯದಲ್ಲಿ ಶಾಶ್ವತವಾಗಿ ನೆಲೆಸಿ ಮುಂದಿನ ಸಮ್ಮೇಲನಕ್ಕೆ ಹರಿಕಾರರಾದರು.

ನಮ್ಮ ಮುದ್ದಿನ ಕೊಂಕಣಿ ಜಮೀನಿನಲ್ಲಿ ಬರಗಾಲ ಬಂದಿದೆ. ಇಲ್ಲಿ ಸಾಹಿತ್ಯ ಬಿತ್ತಿದ್ದರೆ ಬಂಗಾರವನ್ನೇ ಬೆಳೆಯಬಹುದು. ಎಂದಿದ್ದು ಕವಿ ದಿನಕರ ದೇಸಾಯಿಯವರ ನುಡಿ ಸಾರ್ಥಕತೆ ಕಂಡಿದೆ. ಕೊಂಕಣಿ ಜಮೀನಿನಲ್ಲಿ ಈಗ ಬರಗಾಲವಿಲ್ಲ. ಸಾಹಿತ್ಯದ ಬಂಗಾರ ಹುಲುಸಾಗಿ ಬೆಳೆದಿದೆ. ಕೊಂಕಣಿಯನ್ನು ಮುದ್ದಾಡಿ ಕೊಂಕಣಿಯನ್ನೇ ಜನ ಅಪ್ಪಿಕೊಂಡಿದ್ದಾರೆ. ಹೀಗೆ ಎಲ್ಲರಿಂದ ಶ್ರೀ ರಕ್ಷೆ ಪಡೆದ ಕೊಂಕಣಿ ಮುಂದಿನ ದಿನಗಳಿಗೆ ಇತರ ಸಾಹಿತ್ಯಕ್ಕೆ ಸಾಟಿಯಾಗಿ ನಿಲ್ಲುವ ಕಾಲ ದೂರವಿಲ್ಲ. ಮಾಧವಮಾಮ ಬೆಳಗಿಸಿದ ಕೊಂಕಣಿ ಜ್ಯೋತಿಯಿಂದ ಈಗ ಲಕ್ಷೋಪಲಕ್ಷ ಕೊಂಕಣಿ ಜ್ಯೋತಿಗಳು ಬೆಳಗುತ್ತಿವೆ.

# ಪತ್ರಿಕಾ ಪ್ರಪಂಚದಲ್ಲಿ ನಮ್ಮ ಜನ

ಪತ್ರಿಕಾ ರಂಗದಲ್ಲಿ ನಮ್ಮವರು ಸಾಧನೆಯನ್ನು ಮೆರೆದಿದ್ದಾರೆ. ಈಗಲೂ ಕೆಲವರೂ ದುಡಿಯುತ್ತಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪೂರ್ವ ಸಿದ್ದಾಪೂರದಲ್ಲಿ 'ಸರಸ್ವತಿ' ಎಂಬ ಪತ್ರಿಕೆ ಆರ್.ಎನ್. ಭಟ್ಕಳಕರರು ಆರಂಭಿಸಿದರು. ಕೆಲಕಾಲ ನಡೆದು ಕಣ್ಣು ಮುಚ್ಚಿತು. ಆದರೂ ಅದಕ್ಕೊಂದು ಇತಿಹಾಸವಿದೆ. ಅದರ ನಂತರ ದೊಡ್ಡ ಸಾಹಸ ಮಾಡಿ ೮೮ ವರ್ಷಗಳಿಂದಲೂ ಉಸಿರಾಡುತ್ತಿರುವ 'ಕಾನಡಾವೃತ್ತ' ಒಂದು ದಾಖಲೆ ನಿರ್ಮಿಸಿದೆ. ಕೆಲವು ಕಾಲ ಎನ್. ಜಿ. ಶಾನಭಾಗ, ಉಪೇಂದ್ರ ಭಟ್ಟರು ನಡೆಸಿದ ಕಾನಡಾವೃತ್ತ ಪಾಂಡುರಂಗ ಶಾನಭಾಗರು ತುಂಬ ವರ್ಷ ನಡೆಸಿಕೊಂಡು ಬಂದರು. ಈಗ ಅವರ ಮಗ ಶ್ರೀಕಾಂತ ಶಾನಭಾಗ ಸ್ವತಃ ದುಡಿದು ನಷ್ಟದಲ್ಲಿಯೂ ಪತ್ರಿಕೆ ನಡೆಸಿಕೊಂಡು ಬಂದಿರುವುದೊಂದು ಸೋಜಿಗವೂ ಹೌದು. ಸಾಹಸವೂ ಹೌದು.

ಪ್ರಸಿದ್ಧ ವಕೀಲರಾಗಿದ್ದ ಎನ್. ಜಿ. ಶಾನಭಾಗರು ಚುನಾವಣೆ ಎಂಬ ವಾರಪತ್ರಿಕೆ ಮತ್ತು 'ಜೀವೋತ್ತಮ' ದ್ವೈಮಾಸಿಕ ಪತ್ರಿಕೆಯನ್ನು ಬಹಳ ವರ್ಷ ನಡೆಸಿದರು. ಎನ್. ಜಿ. ಶಾನಭಾಗರ ಖಾರವಾದ ಕಟು ಸತ್ಯವನ್ನು ನಿರ್ಭೀತಿಯಿಂದ ಹೇಳುವ ಶೈಲಿ ಚುನಾವಣೆಯ ಆಕರ್ಷಣೆಗಳಲ್ಲೊಂದಾಗಿತ್ತು. ಅವರ ನಿಧನದ ನಂತರ ಚುನಾವಣೆ ಬಹಳ ಕಾಲ ನಡೆಯಲಿಲ್ಲ. ಆದರೆ ಅವರ ಮಗ ವೆಂಕಟೇಶ ಶಾನಭಾಗರು ಮಾತ್ರ 'ಜೀವೋತ್ತಮ' ಇಂದಿಗೂ ನಡೆಸಿಕೊಂಡು ಬಂದಿದ್ದಾರೆ. ಜೀವೋತ್ತಮ ಆಧ್ಯಾತ್ಮಿಕ ವಿಚಾರಧಾರೆಯನ್ನು ಹರಿಸುತ್ತಾ ವೈಚಾರಿಕ ವೇದಿಕೆಯನ್ನು ಸ್ಥಾಪಿಸಿದೆ.

ಸರ್ವಂಟ್ಸ ಆಫ್ ಇಂಡಿಯಾ ಸೊಸೈಟಿಯು ಕಾರ್ಯದರ್ಶಿಗಳಾದ ಪ್ರಸಿದ್ಧ ಕವಿಗಳೂ ಆದ ದಿನಕರ ದೇಸಾಯಿಯವರು ಸುಮಾರು ಎರಡು ದಶಕ 'ಜನಸೇವಕ' ಎಂಬ ವಾರಪತ್ರಿಕೆಯನ್ನು ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದರು. ಇದು ಜಿಲ್ಲೆಯ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತಿತ್ತು. ಈ ಪತ್ರಿಕೆಯಲ್ಲಿ ನಿರಂತರವಾಗಿ ಗೌರೀಶ ಕೈಕಿಣಿಯವರ ಬರಹಗಳು ಮತ್ತು ದಿನಕರ ದೇಸಾಯರ ಚುಟುಕುಗಳು ಆಕರ್ಷಣೆಯ ಕೇಂದ್ರವಾಗಿತ್ತು. ಅದೂ ಆರ್ಥಿಕ ಅಡಚಣೆಯಿಂದ ನಿಂತುಹೋಯಿತು.

ಕಾರವಾರದ ವಕೀಲರಾದ ಎಸ್. ಕೆ. ಪೈ ಅವರು 'ನಾಗರಿಕ' ಎಂಬ ವಾರಪತ್ರಿಕೆ ನಡೆಸುತ್ತಿದ್ದರು. ಅದರಲ್ಲಿ ಮ.ಗ. ಶೆಟ್ಟಿ, ಹನುಮಂತರಾವ ಮಾಂಜ್ರೇಕರ್ ಶ್ಯಾ.ಮಂ. ಕೃಷ್ಣರಾಯ, ಆನಂದವರ್ತಿ ಮೊದಲಾದವರು ಬರೆಯುತ್ತಿದ್ದರು. ಜಿಲ್ಲೆಯ ಅನೇಕ ಬರಹಗಾರರನ್ನು ಪ್ರೋತ್ಸಾಹಿಸಿದ ಕೀರ್ತಿ 'ನಾಗರಿಕ' ಕ್ಕೆ ಸಲ್ಲುತ್ತಿದೆ. ಕಳೆದ ಒಂದು ದಶಕದಿಂದ ಇದು ಹೊನ್ನಾವರದಿಂದ ಪ್ರಕಟವಾಗುತ್ತಿದೆ.

ಶಿರಸಿ ಮಾರಿಕಾಂಬಾ ದೇವಾಲಯದ ವತಿಯಿಂದ 'ಆರಾಧನಾ' ಎಂಬ ಮಾಸಪತ್ರಿಕೆ ಪ್ರಕಟವಾಗುತ್ತಿತ್ತು. ಜಿಲ್ಲೆಯ ಅನೇಕ ಬರಹಗಾರರು ಈ ಪತ್ರಿಕೆಯಲ್ಲಿ ಬರೆಯುತ್ತಿದ್ದರು. ಶ್ರೀಧರ ಬೈಲೂರು ಈ ಪತ್ರಿಕೆಯ ಸಂಪಾದಕರಾಗಿದ್ದರು. ಇದರಲ್ಲಿ ವಿನಾಯಕ ಮಾಡಗೇರಿಯವರ ಬರಹಗಳು ಪ್ರಕಟವಾಗುತ್ತಿತ್ತು.

ತರಂಗ ಪತ್ರಿಕೆಯ ಸಂಪಾದಕರಾಗಿ ಸಂತೋಷಕುಮಾರ ಗುಲ್ವಾಡಿ ಮತ್ತು 'ನೂತನ' ವಾರಪತ್ರಿಕೆಯ ಸಂಪಾದಕರಾಗಿ ಶ್ಯಾ.ಮಂ.ಕೃಷ್ಣರಾಯರು ದುಡಿದಿದ್ದಾರೆ.

ಮಂಗಳೂರಿನ ಸು.ನಾ. ಮಲ್ಯರು 'ವಿಕ್ರಮ ಪತ್ರಿಕೆಯನ್ನು ನಡೆಯಿಸಿಕೊಂಡು ಬಂದರು. ರಾಜಕೀಯ ವಿಚಾರಗಳನ್ನು ರೂಪಿಸಲು ತುಂಬಾ ಸಹಾಯ ಮಾಡಿತು. ಉದಯವಾಣಿಯ ಸಂಪಾದಕರಾಗಿದ್ದ ಮೋಹನದಾಸ ಪೈ, ಸತೀಶ ಪೈ, ಎಷ್ಟೋ ವರ್ಷಗಳಿಂದ ಪತ್ರಿಕಾರಂಗದಲ್ಲಿದ್ದಾರೆ. ಇತ್ತೀಚೆಗೆ ಶ್ರೀಮತಿ ಸಂಧ್ಯಾ ಪೈ ತರಂಗದ ಕಾರ್ಯಕಾರಿ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದಲ್ಲದೇ ಡಾ|| ಜಿ. ಎಂ. ಎ. ಪೈ ಪ್ರತಿಷ್ಠಾನದ ಪರವಾಗಿ 'ಪಂಚ್ಕಾದಾಯ' ಎಂಬ ಕೊಂಕಣಿ ಮಾಸಿಕ ಪತ್ರಿಕೆ ಹೊರಟಿರುತ್ತಿದ್ದೆ. ಈ ಪತ್ರಿಕೆಯ ಸಂಪಾದಕರು ಮಂಗಳೂರಿನ ದಾಮೋದರ ಪ್ರಭು, ಕಾರ್ಯಕಾರಿ ಸಂಪಾದಕರು ಬಂಟ್ವಾಳದ ಶಾಂತಾರಾಮ ಬಾಳಿಗಾರವರು. ಇದರಲ್ಲಿ ಕರ್ನಾಟಕ, ಕೇರಳ, ಗೋವೆಯ ಅನೇಕ ಲೇಖಕರ ಲೇಖನಗಳು ಪ್ರಕಟವಾಗುತ್ತಿದೆ. ಈ ಪತ್ರಿಕೆಯ ಸ್ಥಾಪಕ ಸಂಪಾದಕರು ಮಂಗಳೂರಿನ ಬಿ. ಎ. ಬಾಳಿಗಾರು ಇವರು 25 ವರ್ಷ 'ಪಂಚ್ಕಾದಾಯ' ನಡೆಸಿ ಡಾ|| ಟಿ. ಎಂ. ಪೈ ಪ್ರತಿಷ್ಠಾನಕ್ಕೆ ವಹಿಸಿ ಕೊಟ್ಟದ್ದಾರೆ.

ವಿ. ಎಸ್. ಕುಡ್ವಾ ಎಂಬುವರು ಕೆಲವು ವರ್ಷ 'ಸಾರಸ್ವತ' ಎಂಬ ಕೊಂಕಣಿ ಮಾಸಿಕ ನಡೆಸಿದರು. ಅದರಲ್ಲಿ ದಾಮೋದರ ಬಾಳಿಗಾ, ಬಿ. ಎ. ಬಾಳಿಗಾ, ನರಹರಿ ಪ್ರಭು, ರಾಷ್ಟ್ರಕವಿ ಎಂ. ಗೋವಿಂದ ಪೈ ರವರ ಲೇಖನವು ಪ್ರಕಟವಾಗುತ್ತಿದ್ದವು. ಹಿನ್ನೆಲೆಯಲ್ಲಿ ಬಿ. ಎ. ಬಾಳಿಗರು ಪತ್ರಿಕೆಯ ಸಂಪಾದಕ ಕಾರ್ಯಕ್ಕೆ ಕುಡ್ವಾರಿಗೆ ಸಹಾಯ ಮಾಡುತ್ತಿದ್ದರು. ಕೆಲವು ವರ್ಷ ನಿಂತು ಹೋದ ಈ ಪತ್ರಿಕೆ ಮತ್ತೆ 1941ರಲ್ಲಿ ಆರಂಭವಾಗಿ 1946 ರವರೆಗೆ ವಾರ ಪತ್ರಿಕೆಯಾಗಿ ನಡೆಯಿತು. ಇದೇ ಕಾಲದಲ್ಲಿ ಬಿ. ಎ. ಬಾಳಿಗರು ಅಲ್ಲಿ ಕೊಂಕಣಿ ಪತ್ರಿಕೋದ್ಯಮದ ಪಾಠ ಕಲಿತರು. ಈ ಪತ್ರಿಕೆಯಲ್ಲಿ ಕೊಂಕಣ ಪರಿಷತ್ತಿನ ಸ್ಥಾಪಕ ಮಾಧವ ಮಂಜುನಾಥ ಶಾನಭಾಗರೂ ಬರೆಯುತ್ತಿದ್ದರು. ಪ್ರಸಿದ್ಧ ಹಾಸ್ಯ ಲೇಖಕ ಕುಡ್ವಿ ವಾಸುದೇವ ಶೆಣ್ಯೆ ಅವರ ಲೇಖನಗಳೂ ಪ್ರಕಟವಾಗುತ್ತಿತ್ತು.

ಕಳೆದ ಹನ್ನೆರಡು ವರ್ಷಗಳಿಂದ 'ಸರಸ್ವತಿ ಪ್ರಭಾ' ಎಂಬ ಕೊಂಕಣಿ ಮಾಸಪತ್ರಿಕೆಯನ್ನು ಹುಬ್ಬಳ್ಳಿಯಿಂದ ಹೊರಡಿಸುತ್ತಿದ್ದಾರೆ. ಇದರ ಸಂಪಾದಕರು ಸುರೇಶ ಶನೈ ಆರಗೋಡು. ಇದು ಕನ್ನಡ ಲಿಪಿಯಲ್ಲಿ ಹೊರಡಿಸುವುದರಿಂದ ಕನ್ನಡ ನಾಡಿನ ಅನೇಕ ಬರಹಗಾರರು ಈ ಪತ್ರಿಕೆಯಲ್ಲಿ ಕವನ, ಲೇಖನವನ್ನು ಬರೆಯುತ್ತಾರೆ. ಕಳೆದ ಎಂಟ್ಹತ್ತು ವರ್ಷಗಳಿಂದ ಕನ್ನಡದ 'ಕುಂದಪ್ರಭಾ' ಪತ್ರಿಕೆಯ ಸಂಪಾದಕರಾದ ಯು. ಎಸ್. ಶಣೈ ಎಂಬುವರು ಕೊಂಕಣಿಯಲ್ಲಿ 'ಜೈ ಕೊಂಕಣಿ' ಮಾಸ ಪತ್ರಿಕೆಯನ್ನು ನಡೆಸುತ್ತಾರೆ. ಶಿರಸಿಯಿಂದ ಹೊರಡುವ 'ಧ್ಯೇಯನಿಷ್ಠ ಪತ್ರಕರ್ತ'ದಲ್ಲಿ ಪ್ರತಿ ಭಾನುವಾರ ಒಂದು ಪುಟ ಕೊಂಕಣಿ ಸಾಹಿತ್ಯ ಪ್ರಕಟಿಸುತ್ತಾರೆ. ಅಧರ ಸಂಪಾದಕರು ಪ್ರೊ। ರಾಮು ಕಿಣಿ.

1923 ರ ಸುಮಾರಿಗೆ ಕೇರಳದಲ್ಲಿ ರಾಮ ಪೈ ಎಂಬುವರು 'ಸಾರಸ್ವತ ಭೋದಿನಿ' ಎಂಬ ಮಲೆಯಾಳರ ಮಾಸಪತ್ರಿಕೆ ಹೊರಡಿಸಿದರು. ಅದರಲ್ಲಿ ಕೆಲವು ಪುಟ ಕೊಂಕಣಿಗೆ ಮೀಸಲಾಗಿಡುತ್ತಿದ್ದರಿಂದ ಅನೇಕ ಕೊಂಕಣಿ ಬರಹಗಾರರು ಹುಟ್ಟಿಕೊಂಡರು.

ಗೋವೆಯಲ್ಲ ಚಂದ್ರಕಾಂತ ಕಿಣಿ ಸಂಪಾದಿಸುತ್ತಿರುವ 'ರಾಷ್ಟ್ರಮತ' ಎಂಬ ಮರಾಠಿ ದಿನಪತ್ರಿಕೆ ಕಳೆದ 38 ವರ್ಷಗಳಿಂದ ಪ್ರಕಟಿಸುತ್ತಿದ್ದಾರೆ. ಇವರು ಇತ್ತೀಚಿನ ಕೆಲವು ವರ್ಷಗಳಿಂದ ರವಿವಾರದ ಪತ್ರಿಕೆಯನ್ನು ಕೊಂಕಣಿಯಲ್ಲಿ ಪ್ರಕಟಿಸುತ್ತಾರೆ. ಕಳೆದ ಎರಡು-ಮೂರುದಶಕಗಳಿಂದ ಇವರು 'ಕುಳಾಗರ' ಎಂಬ ಕೊಂಕಣಿ ಮಾಸ ಪತ್ರಿಕೆಯನ್ನು ಪ್ರಕಟಿಸುತ್ತಾ ಬಂದಿದ್ದಾರೆ.

ಗುರುನಾಥ ಕಳೇಕಾರ ಎಂಬುವರು 'ನವೆಂ ಗೋಂಯ್' ಎಂಬ ಮಾಸ ಪತ್ರಿಕೆಯನ್ನು ಕೆಲವು ವರ್ಷ ನಡೆಸಿದರು.

ಸುಮಂತ ಕಳೇಕಾರರು ಅನೇಕ ವರ್ಷ 'ಜಾಗ' ಎಂಬ ಕೊಂಕಣಿ ಮಾಸ ಪತ್ರಿಕೆ ನಡೆಸುತ್ತಿದ್ದರು. ಈಗ 'ಜಾಗ' ದ ಸಂಪಾದಕರಾಗಿ ಮಾಧವಿ ಸರದೇಸಾಯಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅದರಲ್ಲಿ ಕಥೆ, ಕವನ, ವೈಚಾರಿಕ ಲೇಖನಗಳು ಪ್ರಕಟವಾಗುತ್ತದೆ.

ರವೀಂದ್ರ ಕಳೇಕಾರರು ಮುಂಬಯಿಯಲ್ಲಿ ಕೆಲವು ವರ್ಷ 'ಮಿರ್ಗ' ಎಂಬ ಮಾಸ ಪತ್ರಿಕೆ ಸಂಪಾದಿಸುತ್ತಿದ್ದರು. 'ಸಂಯುಕ್ತ ಸಾರಸ್ವತ' ಎಂಬ ಇಂಗ್ಲೀಷ ಪತ್ರಿಕೆಯ ಸಂಪಾದಕರಾಗಿ 'ಜಯವೀರ ಇಸಳೂರ' ಕಾರ್ಯ ನಿರ್ವಹಿಸುತ್ತಿದ್ದಾರೆ.

ಮುಂಬೈಯ ಎಮ್. ವಿ. ಕಾಮತ ಹಿಂದೆ ಪ್ರಸಿದ್ಧ ದಿ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾದ ಸಂಪಾದಕರಾಗಿದ್ದರು. ಈಗ ದೇಶದ ಪ್ರಮುಖ ಪತ್ರಿಕೆಗಳಿಗೆ ಪ್ರಮುಖ ಅಂಕಣಕಾರರಾಗಿ ಬರೆಯುತ್ತಿದ್ದಾರೆ. ಇವರು ಸಾರಸ್ವತರ ಹೆಮ್ಮೆಯ ಪತ್ರಕರ್ತರು.

ಒಟ್ಟಿನಲ್ಲಿ ನಮ್ಮವರು ಪತ್ರಿಕಾ ಕ್ಷೇತ್ರದಲ್ಲಿ ಮಹತ್ವದ ಯೋಗದಾನ ನೀಡಿದ್ದಾರೆ.



# ಉತ್ತರ ಕನ್ನಡದಲ್ಲಿ ಉದ್ಯೋಗಾವಕಾಶಗಳು

ರಾಜ್ಯದ ಹತ್ತನೇ ದೊಡ್ಡ ಜಿಲ್ಲೆಯಾದ ಉತ್ತರ ಕನ್ನಡ 144 ಕಿ.ಮೀ. ಉದ್ದದ ಕರಾವಳಿಯನ್ನು ಹೊಂದಿದೆ. 10,24,679 ಹೆಕ್ಟೇರ್ ಭೌಗೋಳಿಕ ಪ್ರದೇಶದಲ್ಲಿ 8,15,202 ಹೆಕ್ಟೇರ್ ಪ್ರದೇಶ ಅರಣ್ಯದಿಂದ ಕೂಡಿದೆ. ಸರಕಾರ ಮತ್ತು ಹಣಕಾಸು ಸಂಸ್ಥೆಗಳು ನೀಡಿದ ಸಹಕಾರವನ್ನು ಬಳಸಿಕೊಂಡು ಅಲ್ಲಲ್ಲಿ ಉದ್ದಿಮೆಗಳು ಬೆಳದಿವೆಯಾದರೂ ಗಮನೀಯ ಪ್ರಗತಿ ಕಂಡುಬಂದಿಲ್ಲ. ಆದುದರಿಂದಲೇ ಜಿಲ್ಲೆಯ ಸಾರಸ್ವತ ಸಮಾಜದವರು ಅವಕಾಶ ಅರೆಸಿ ನಗರಗಳಿಗೆ ವಲಸೆ ಹೋಗಿದ್ದಾರೆ.

ಸೂಕ್ಷ್ಮವಾಗಿ ಗಮನಿಸಿದರೆ ಸಣ್ಣ ಹಾಗೂ ಮಧ್ಯಮ ಕೈಗಾರಿಕೆ ಕರಕುಶಲ ಹಾಗೂ ಗುಡಿ ಕೈಗಾರಿಕೆ, ಕೃಷಿ ಹಾಗೂ ಅರಣ್ಯ ಆಧಾರಿತ ಕೈಗಾರಿಕೆ ಮತ್ತು ಮತ್ಸೋದ್ಯಮಕ್ಕೆ ಪೂರಕವಾದ ಕೈಗಾರಿಕೆಗಳಿಗೆ ವಿಫುಲವಾದ ಅವಕಾಶಗಳಿವೆ. ರಾಜ್ಯದಲ್ಲಿಯೇ ನೈಸರ್ಗಿಕವಾಗಿ ಅತ್ಯಂತ ಶ್ರೀಮಂತರಾಗಿರುವ, ಅಪಾರ ಖನಿಜ ಸಂಪತ್ತು, ಅರಣ್ಯ ಸಂಪತ್ತು ಮತ್ತು ಸಮುದ್ರ ಸಂಪತ್ತನ್ನು ಹೊಂದಿರುವ ಜಿಲ್ಲೆ ನಮ್ಮದಾಗಿದೆ.

ಹಲವು ಸಾವಿರ ಕೋಟಿ ರೂಪಾಯಿಗಳು ಬಂಡವಾಳದೊಂದಿದೆ. ಜಿಲ್ಲೆಯಲ್ಲಿ ಪ್ರಾರಂಭವಾಗಿರುವ ಕೈಗಾ ಅಣು ವಿದ್ಯುತ್ ಸ್ಥಾವರ, ಸೀಬರ್ಡ ನೌಕಾನೆಲೆ, ಅಂತರಾಷ್ಟ್ರೀಯ ಮಟ್ಟಕ್ಕೇರಲಿರುವ ತದಡಿ ಬಂದರು ಮತ್ತು ಕೊಂಕಣ ರೇಲ್ವೆ, ವೈವಿಧ್ಯತೆಯಿಂದ ಕೂಡಿದ ಹೊಸ ಉದ್ಯೋಗಗಳನ್ನು ಸೃಷ್ಟಿ ಮಾಡಲಿವೆ. ಆಹಾರ, ಕಚ್ಚಾವಸ್ತು, ನೀರು ಮತ್ತು ವಿದ್ಯುತ್ ಪೂರೈಕೆ, ರಸ್ತೆ ಮತ್ತು ಕಟ್ಟಡ ನಿರ್ಮಾಣ, ಅರಣ್ಯ ಉತ್ಪಾದನೆ ಸಾಗಾಣಿಕೆ ಇವುಗಳು ಉತ್ಸಾಹಿ ತರುಣರಿಗೆ ಬಂಡವಾಳ ತೊಡವಿಕೆಯಲ್ಲಿ ಬಾಗಿಲುಗಳನ್ನು ತೆರೆದಿವೆ. ಆದರೆ ಅವಕಾಶಗಳು ನಾವಿದ್ದಲ್ಲಿಗೆ ಬರಲಾರವು. ನಾವೇ ಉದ್ಯಮಶೀಲತೆಯನ್ನು ಹುಡುಕಿಕೊಂಡು ಹೋಗಬೇಕಾಗಿದೆ.

ಉತ್ತರ ಕನ್ನಡದ ರುಚಿಕಟ್ಟಾದ ತಿನಿಸುಗಳಾದ ಹಲಸಿನ ಮತ್ತು ಉದ್ದಿನ ಹಪ್ಪಳಗಳು ಚಿಪ್ಸಗಳು (ಬಾಳ್ಕ), ಒಣಗಿಸಿದ ಹಣ್ಣುಗಳು (ಸುಕ್ಕೇಳಿ), ಸಂಡಿಗೆ, ಕೊಕಂಜ್ಯುಸ್, ತೊಡದೇವು, ಉಪ್ಪಿನಕಾಯಿ, ಅಡಿಕೆಪುಡಿ, ಏಲಕ್ಕಿ, ಕಾಳಮೆಣಸು, ಮುರುಗಲ, ಕಾಡುಜೇನು, ಗೇರುಬೀಜ, ಮಾವುರಸ ಹೀಗೆ ನೂರಾರು ಅರಣ್ಯ ಮತ್ತು ಕೃಷಿ ಆಧಾರಿತ ಪದಾರ್ಥಗಳನ್ನು ಸಂಸ್ಕರಿಸಿ ಆಕರ್ಷಕವಾಗಿ ಪ್ಯಾಕ್ ಮಾಡಿ ನಗರ ಪ್ರದೇಶಗಳಿಗೆ ಪರಿಚಯಿಸಬಹುದು. ನಮ್ಮ ಅರಣ್ಯಗಳಲ್ಲಿ ಸಿಗುವ ವಿಫುಲ ಆಯುರ್ವೇದಿಕ ಸಸ್ಯಗಳನ್ನು ಸಂಸ್ಕರಿಸಿ ಔಷಧಿ ಉತ್ಪಾದನಾ ಕೇಂದ್ರಗಳಿಗೆ ಸಾಗಿಸಬಹುದು. ತೆಂಗಿನಎಣ್ಣೆ, ತೆಂಗಿನತುರಿ ಹಾಗೂ ತಿನಿಸುಗಳನ್ನು ಸಿದ್ಧಪಡಿಸುವ ಸಣ್ಣ ಪ್ರಮಾಣದ ಘಟಕಗಳನ್ನು ಸ್ಥಾಪಿಸಬಹುದು. ಕೃಷಿಯಲ್ಲಿಯ ಸಧ್ಯದ ಆಧುನಿಕ ತಂತ್ರಜ್ಞಾನದಿಂದ ಈಗ ತೋಟಗಾರಿಕೆ ಸುಲಭ ಸಾಧ್ಯವಾಗಿದ್ದು ಹಲವಾರು ಬಗೆಯ ಸಾಂಬಾರು ಪದಾರ್ಥಗಳು ಮತ್ತು ಆರ್ಥಿಕ ತೋಟಗಾರಿಕಾ ಬೆಳೆಗಳನ್ನು ಬೆಳೆಸಲು ಯುವಕರು ಹೆಚ್ಚು ಹೆಚ್ಚು ಮುಂದೆ ಬರಬೇಕಾಗಿದೆ.

ಜಿಲ್ಲಾ ಕೈಗಾರಿಕಾ ಕೇಂದ್ರ, ತಾಲ್ಲೂಕಾ ಕೇಂದ್ರಗಳಲ್ಲಿ ಹೊಸ ಉದ್ಯಮಗಳನ್ನು ಸ್ಥಾಪಿಸಲು ಬಯಸುವವರಿಗೆ ಮಾಹಿತಿ ಪುಸ್ತಕಗಳನ್ನು ಇಟ್ಟಿದೆ. ಆದರೂ ಯುವಕರು ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಪ್ರವಾಸೋದ್ಯಮ ಉತ್ತರ ಕನ್ನಡದ ಭವಿಷ್ಯದ ಉದ್ಯಮವಾಗಿ ಮೂಡಿಬರುವುದರಲ್ಲಿ ಸಂಶಯವಿಲ್ಲಾ.

ಉತ್ತರ ಕನ್ನಡಾದ್ಯಂತ 40ಕ್ಕೂ ಹೆಚ್ಚು ಪ್ರೇಕ್ಷಣೀಯ ಸ್ಥಳಗಳಿದ್ದು ಪ್ರವಾಸಿಗರಿಗೆ ವಿವಿಧತೆಯನ್ನು ನೀಡಲಿವೆ. ಶುಭ್ರ ಆಕರ್ಷಕವಾದ ಕರಾವಳಿ ತೀರಗಳು ಜಲಾಯನ ಹಾಗೂ ಜಲಕ್ರೀಡೆಗಳಿಗೆ ಅವಕಾಶ ಒದಗಿಸುವ ನದಿಗಳು, ಜಲಾಶಯಗಳ ಹಿನ್ನೀರ ತಾಣಗಳು ಹಲವಾರು ಸಣ್ಣ ದೊಡ್ಡ ಜಲಪಾತಗಳ ನಿತ್ಯಹರೀದ್ವರ್ಣ ಕಾಡುಗಳು ಕಣಿವೆಗಳು ಮನಸೆಳೆಯುವ ತೋಟಗಳು ಐತಿಹಾಸಿಕ ಮತ್ತು ಪುರಾಣ ಪ್ರಸಿದ್ಧ ಕ್ಷೇತ್ರಗಳು ಇನ್ನೂ ಹೊರಜಗತ್ತಿಗೆ ಪರಿಚಯವಾಗಬೇಕಾಗಿವೆ. ನಗರ ಜೀವನದಿಂದ ಬೇಸತ್ತ ನಗರವಾಸಿಗಳಿಗೆ ಉತ್ತರ ಕನ್ನಡ ಆಲ್ಹಾದಕರ ವಾತಾವರಣ, ವೈವಿಧ್ಯಮಯ ತಿನಿಸುಗಳು, ಮನಸ್ಸಿಗೆ ಮುದ ನೀಡುವ ಹಲವಾರು ತಾಣಗಳು ಇಲ್ಲಿದ್ದು ಅವನ್ನು ಪ್ರವಾಸೋದ್ಯಮವಾಗಿ ಅಭಿವೃದ್ಧಿಪಡಿಸಬೇಕಾಗಿದೆ. ಸರ್ಕಾರವು ಇಲ್ಲಿ ಸಂಪರ್ಕ ಸಾಧನಗಳನ್ನು ಅಭಿವೃದ್ಧಿ ಪಡಿಸಿದ್ದೆ ಆದಲ್ಲಿ ಹೊರ ರಾಜ್ಯ ಮತ್ತು ಜಿಲ್ಲೆಗಳಿಂದಷ್ಟೇ ಅಲ್ಲದೇ ವಿದೇಶಗಳಿಂದಲೂ ಸಹ ಪ್ರವಾಸಿಗರ ಮಹಾಪುರವೇ ಉತ್ತರ ಕನ್ನಡಕ್ಕೆ ಹರಿದು ಬರಲಿದೆ. ದೂರದರ್ಶಿ ಹಾಗೂ ಹೊಸತನ್ನು ಬಯಸುವ ಯುವಕರು. ಈ ಉದ್ಯಮವನ್ನು ಅಭಿವೃದ್ಧಿ ಪಡಿಸಿ ಜಿಲ್ಲೆಗೆ ಸಮೃದ್ಧಿಯನ್ನು ತರಲಿ.

# ಉತ್ತರ ಕನ್ನಡ ಪ್ರವಾಸಿ ಮಾರ್ಗದರ್ಶಿ

(ದೂರ ಯಲ್ಲಾಪುರದಿಂದ ಕಿ.ಮಿ. ಗಳಲ್ಲಿ)

| ಪ್ರವಾಸಿ ಕೇಂದ್ರ | ವಿಶೇಷತೆ | ಸಮೀಪದ ಪಟ್ಟಣ | ಕಿ.ಮಿ. |
|---|---|---|---|
| ಸಾತೊಡ್ಡಿ ಫಾಲ್ಸ | ಜಲಪಾತ | ಯಲ್ಲಾಪುರ | 27 |
| ದಬ್ಬೆಸಾಲ | ಜಲಕ್ರೀಡೆ | ಯಲ್ಲಾಪುರ | 24 |
| ಮಾಗೋಡ ಫಾಲ್ಸ | ಜಲಪಾತ | ಯಲ್ಲಾಪುರ | 19 |
| ಜೇನಕಲ್ಲಗುಡ್ಡ | ಕಣಿವೆ ವೀಕ್ಷಣೆ | ಯಲ್ಲಾಪುರ | 20 |
| ಕವಡಿಕೆರೆ | ಜಲಾಶಯ/ಪಕ್ಷಿಧಾಮ | ಯಲ್ಲಾಪುರ | 8 |
| ಶಿರಲೆ ಫಾಲ್ಸ | ಜಲಪಾತ | ಯಲ್ಲಾಪುರ | 13 |
| ಕಳಚೆ ವ್ಯಾಲಿ/ಕೊಡಸಳ್ಳಿ | ವಿದ್ಯುತ್ ಕೇಂದ್ರ | ಯಲ್ಲಾಪುರ | 30 |
| ಸ್ವರ್ಣವಲ್ಲಿ/ಸೋಂದಾ | ಶ್ರೀಮಠ | ಶಿರಸಿ | 35 |
| ಸಹಸ್ರಲಿಂಗ | ಪುಣ್ಯಕ್ಷೇತ್ರ | ಶಿರಸಿ | 34 |
| ಶಿವಗಂಗಾ ಜಲಪಾತ | ಜಲಪಾತ | ಶಿರಸಿ | 73 |
| ಮಾರಿಕಾಂಬಾ ದೇವಾಲಯ | ಶಕ್ತಿಪೀಠ | ಶಿರಸಿ | 47 |
| ಬನವಾಸಿ | ಐತಿಹಾಸಿಕ ಕೇಂದ್ರ | ಶಿರಸಿ | 80 |
| ಸುಪಾಡ್ಯಾಮ/ಪವರಹೌಸ | ವಿಧ್ಯುತ್ ಕೆಂದ್ರ | ದಾಂಡೇಲಿ | 70 |
| ನಾಗಝುರಿ ಪವರಹೌಸ | ವಿದ್ಯುತ್ ಕೇಂದ್ರ | ದಾಂಡೇಲಿ | 45 |
| ಸೈಕ್ಸಪಾಯಿಂಟ | ಕಣಿವೆ ವೀಕ್ಷಣೆ | ದಾಂಡೇಲಿ | 45 |
| ಸಿಂಥೇರಿರಾಕ್ಸ | ಪ್ರವಾಸಿ ಕೆಂದ್ರ | ದಾಂಡೇಲಿ | 72 |
| ಉಳವಿ | ಶ್ರೀಕ್ಷೇತ್ರ | ದಾಂಡೇಲಿ | 100 |
| ಅಣಶಿ ರಿಜರ್ವ ಫಾರೆಸ್ಟ | ಫಾರೆಸ್ಟ ಸಫಾರಿ | ದಾಂಡೇಲಿ | 100 |
| ಸಿದ್ದಾ (ಕವಲೇಗುಹೆ) | ಪುಣ್ಯಕ್ಷೇತ್ರ | ದಾಂಡೇಲಿ | 40 |
| ಫಾರೆಸ್ಟಸಫಾರಿ/ರೆಸಾರ್ಟ | ಜಂಗಲ್ ಸಫಾರಿ | ದಾಂಡೇಲಿ | 65 |
| ಕಾರವಾರ ಬಂದರು | ಬಂದರು | ಕಾರವಾರ | 100 |
| ದೇವಭಾಗ/ರೆಸಾರ್ಟ | ಪ್ರವಾಸಿ ಕೇಂದ್ರ | ಕಾರವಾರ | 102 |
| ಬಿಣಗಾ ಬೀಚ | ಪ್ರವಾಸಿ ಕೆಂದ್ರ | ಕಾರವಾರ | 92 |
| ಕೈಗಾ ಅಣು ಸ್ಥಾವರ | ಅಣುಸ್ಥಾವರ | ಕಾರವಾರ | 140 |
| ಜೋಗಫಾಲ್ಸ | ಜಲಪಾತ/ವಿದ್ಯುತ್ ಕೆಂದ್ರ | ಸಿದ್ದಾಪುರ | 100 |
| ಉಂಚಳ್ಳಿ ಜಲಪಾತ | ಜಲಪಾತ | ಸಿದ್ದಾಪುರ | 90 |
| ಲಿಂಗನಮಕ್ಕಿ ಜಲಾಶಯ | ಜಲಾಶಯ | ಸಿದ್ದಾಪುರ | 100 |
| ಬುರಡೆ ಜೋಗ | ಜಲಪಾತ | ಸಿದ್ದಾಪುರ | 83 |
| ಮಲೆಮನೆ ಜೋಗ | ಜಲಪಾತ | ಸಿದ್ದಾಪುರ | 85 |
| ಯಾಣ | ಪುಣ್ಯಕ್ಷೇತ್ರ | ಕುಮಟಾ | 101 |
| ಕರಿಕಾನಮ್ಮ ಹಿಲ್ಸ | ಕಣಿವೆ ವೀಕ್ಷಣೆ | ಹೊನ್ನಾವರ | 129 |
| ಅಪ್ಸರಗೊಂಡ | ಜಲಾಶಯ | ಹೊನ್ನಾವರ | 132 |
| ಇಡಗುಂಜಿ | ಶ್ರೀಕ್ಷೇತ್ರ | ಹೊನ್ನಾವರ | 150 |
| ಮುರುಡೇಶ್ವರ | ಶ್ರೀಕ್ಷೇತ್ರ | ಭಟ್ಕಳ | 152 |
| ನೇತ್ರಾಣಿ ದ್ವೀಪ | ಪ್ರವಾಸಿ ಕೆಂದ್ರ | ಭಟ್ಕಳ | 162 |
| ಹಾಡುವಳ್ಳಿ | ಜೈನರ ಬಸದಿ | ಭಟ್ಕಳ | 181 |
| ಓಂಬೀಚ | ಪ್ರವಾಸಿ ಧಾಮ | ಗೋಕರ್ಣ | 95 |
| ತದಡಿ ಬಂದರು | ಬಂದರು | ಗೋಕರ್ಣ | 95 |
| ಟಿಬೇಟಿಯನ್ ಕಾಲನಿ | ಜೀವನಶೈಲಿ | ಮುಂಡಗೋಡ | 35 |
| ಅತ್ತಿವೇರಿ ಜಲಾಶಯ | ಪಕ್ಷಿಧಾಮ | ಮುಂಡಗೋಡ | 40 |
| ಚೀಗಳ್ಳಿ ದೀಪಗಳು | ಅದ್ಭುತ ದೀಪಗಳು | ಮುಂಡಗೋಡ | 49 |

ಉತ್ತರಕನ್ನಡ ನಿಸರ್ಗ ಭೂಲೋಕದ ಸ್ವರ್ಗ ಪರಿಸರ ನಾಶವೇ ನರಕಕ್ಕೆ ಮಾರ್ಗ
ಪರಿಸರ ಪ್ರಜ್ಞೆ ಬೆಳೆಸುವುದೆ ಯೋಗ್ಯ ಜನಿಸಿರುವುದಿಲ್ಲಿ ನಮ್ಮ ಭಾಗ್ಯ.

# ದಿ|| ರಾಜವೈದ್ಯ ರಾಮಕೃಷ್ಣ ಶೆಣೈ

ಕಾ... ಕಾ... ಕಾಸೀಮ ಮಾ.... ಮಾ... ಮಾಸ್ತರ ಎಂದು ಉಗ್ಗುವ ನನ್ನ ಮಗನ ನಾಲಿಗೆ ಹಾಗೂ ಉಚ್ಚಾರ ಸರಿಯಾಗುವ ಔಷಧಿ ಕಳಿಸಿ ಎಂದು ಮೊರಿಷಸ್ ಪೋರ್ಟ್‌ಲುಯಿಸ್‌ದಿಂದ ಮಹಮದ - ಧುಮ್ಮನಲಿಯವರ ಪತ್ರ ಬಿಳಗಿಗೆ ಬಂದಿತ್ತು.

ಸತತ ಜ್ವರಿಂದ ಹಿಂಡಿ ಹಿಪ್ಪೆಯಾದ ನನ್ನ ಪ್ರಾಯಸ್ಥ ಮಗಳು ಗುಣ ಹೊಂದುವ ಔಷಧಿ ಕಳಿಸಿ ಎಂದು ಬರ್ಮಾದ ರಂಗೂನದಿಂದ ಮತ್ತೊಂದು ಪತ್ರ ಬಿಳಗಿಗೆ ತಲುಪಿತು.

ಇದೇ ರೀತಿ ಅರಬಸ್ಥಾನದ ಎಡನ್‌ದಿಂದ, ಇಂಗ್ಲಂಡಿನ ಡಬ್ಲಿನ್‌ದಿಂದ ಹಾಗೂ ಜಪಾನದ ಟೋಕಿಯೋ ದಿಂದ ವಿವಿಧ ರೋಗಗಳಿಗೆ ಔಷಧಿ ಕಳಿಸುವಂತೆ ಕ್ರಿ.ಶ. 1880 ರಲ್ಲಿ ರಾಜವೈದ್ಯ ಶ್ರೀ ರಾಮಕೃಷ್ಣ ಶೆಣೈ ರಿಗೆ ಬಿಳಿಗಿಗೆ ಪತ್ರ ಬರುತ್ತಿದ್ದವು. ಇವರು ಕಳಿಸುತ್ತಿದ್ದ ಅಂಚೆ ಪಾರ್ಸೆಲ್‌ಗಳಿಗಾಯೇ ಬ್ರಿಟಿಷರು 1890 ರಲ್ಲಿ ಬಿಳಿಗಿಗೆ ಅಂಚೆ ಕಛೇರಿ ಒಂದನ್ನು ತೆರೆದರು. ಆಗಿನ ದಿನಗಳಲ್ಲಿ ಒಂದು ದಿನದ ಪಾರ್ಸೆಲ್‌ಗಳಿಗೆ ಅಂಟಿಸುತ್ತಿದ್ದ ಅಂಚೆ ಚೀಟಿಗಳ ಮೊತ್ತ 15 ರೂಪಾಯಿ ದಾಟುತ್ತಿತ್ತು. ಎಂದರೆ ಈಗಿನ ಆರು ಸಾವಿರ ರೂಪಾಯಿಗೆ ಸಮ. ಬಿಳಗಿಗೆ ಬರುವ ಪಾರ್ಸೆಲ್‌ಗಳ ಸಂಖ್ಯೆ ಎಣಿಸುವದು ದುಸ್ತರವಾಗಿತ್ತು.

ಸಿದ್ಧಾಪುರ ತಾಲೂಕ ಬಿಳಿಗಿ ಪಾಂಡುರಂಗ ಶೆಣೈಯವರ ದ್ವಿತೀಯ ಪುತ್ರರಾದ ಇವರು ಹುಟ್ಟಿದ್ದು 1836 ರಲ್ಲಿ. ಬಹಳ ಕಲಿಯಬೇಕೆಂದು ಆಸೆ ಪಟ್ಟ ಇವರು ಚವತಿ ಹಬ್ಬದ ದಿನ ತಾಯಿಯ ಬಂಗಾರವನ್ನೆಲ್ಲ ಕದ್ದು ಪುಣಾಕ್ಕೆ ಓಡಿ ಹೋದರು. ಯಾರದೋ ಆಶ್ರಯದಲ್ಲಿ ಬೆಳೆದು , ವೈದ್ಯ ಎಂದು ಪ್ರಮಾಣ ಪತ್ರ ಹಿಡಿದು 20 ವರ್ಷಗಳ ನಂತರ ಮನೆಗೆ ಮರಳಿದ ಇವರಿಗೆ ತಂದೆ - ತಾಯಿಯ ವರ ಹೃತ್ಪೂರ್ವಕ ಸ್ವಾಗತ ದೊರೆಯಿತು.

ಕ್ರಿ.ಶ. 1880 ರ ಸುಮಾರಿಗೆ ಇವರ ಖ್ಯಾತಿ ಪರದೇಶಗಳಿಗೆ ಹರಡಿತ್ತು ಮತ್ತು ಬಿಳಿಗಿ ರಾಜಮನೆತನಕ್ಕೆ ರಾಜವೈದ್ಯ ಎಂದಾದರು. ಮದ್ರಾಸ್ ಬಂದರಿನಲ್ಲಿ ಮಾರಾಟವಾಗುತ್ತಿದ್ದ ಪತ್ರಿಕೆಗಳಲ್ಲಿ ಇವರ ಹೆಸರಿನಿಂದ ಜಾಹಿರಾತುಗಳು ಪ್ರಕಟವಾಗುತ್ತಿದ್ದವು . ಇದರಿಂದ ಇತರ ದೇಶಗಳಿಗೆ ಇವರ ಪರಿಚಯವಾಯಿತು. ಇವರಿಗೆ ಬಂದಿದ್ದ ಕೆಲ ಪತ್ರಗಳು ಹಾಗೂ ಇವರನ್ನು ಪರಿಚಯಿಸಿದ ಪತ್ರಿಕೆಗಳ ಪ್ರತಿಗಳು ಇಂದಿಗೂ ಬಿಳಗಿಯಲ್ಲಿರುವ ಅವರ ಕುಟುಂಬದವರಾದ ಮಡಗಾಂವಕರರಲ್ಲಿ ಕಾಣಸಿಗುತ್ತವೆ.

ಇಳಿ ವಯಸ್ಸಿನಲ್ಲಿ ಹೆಂಡತಿ ತೀರಿದಾಗ ವಿಧವೆಯೋರ್ವಳನ್ನು ಮದುವೆ ಆಗಲು ನಿರ್ಣಯಿಸಿದಾಗ ಅಣ್ಣ ದಾಸಪ್ಪ ಶೆಣೈ ವಿರೋಧಿಸಿದರು. ಸಮಾಜ ಬಹಿಷ್ಕಾರ ಹಾಕಿತು. ಗುರುಗಳ ಬಿರುಸು ನುಡಿಗೆ ಹೆದರಿ ಊರು ತೊರೆದು ಸಿದ್ದಾಪುರದ ಹಾಲತಕಟ್ಟಾದಲ್ಲಿ ಮನೆ ಖರಿದಿಸಿ ವಾಸಿಸಿದರು. ಅಲ್ಲಿಯೇ ಆಸ್ಪತ್ರೆ ತೆರೆದು ಅಪಾರ ಸಂಪತ್ತು ಗಳಿಸಿದರು. ಮಕ್ಕಳ್ಳಿಲ್ಲದ ಇವರು ಅಣ್ಣನ ಮಗನನ್ನೇ ದತ್ತು ಪಡೆದು ಆತನಿಗೆ ವಿದ್ಯೆ ಹಾಗೂ ಸಂಪತ್ತು ಕೊಟ್ಟು 1918 ರಲ್ಲಿ ಕಾಲವಶರಾದರು.

ದತ್ತು ಪುತ್ರ ಹರಿ ರಾಮಕೃಷ್ಣ ಇವರು ರಾಜವೈದ್ಯ, ವೈದ್ಯಕೀಯದ ಜೊತೆಗೆ ರಾಷ್ಟ್ರೀಯ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿ ಜನತೆಯ ಮಾರ್ಗದರ್ಶಕ ರಾಗಿರುವುದು ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ.

ಬ್ರಿಟಿಷರ ಆಳ್ವಿಕೆಯಲ್ಲಿ ಅಂತರಾಷ್ಟ್ರೀಯ ಖ್ಯಾತಿಗೊಂಡ ವೈದ್ಯರೊಬ್ಬರು ಬಿಳಿಗಿಯಲ್ಲಿ ಹುಟ್ಟಿ ಈ ಪ್ರದೇಶದಲ್ಲಿಯೇ ವಾಸಿಸುತ್ತಿದ್ದರು ಎನ್ನುವುದು ಅಭಿಮಾನದ ಸಂಗತಿ.

## ಪ್ರೌಢಶಿಕ್ಷಣ ಪ್ರಾರಂಭಿಸುವ ವಿದ್ಯಾರ್ಥಿಗಳಿಗೊಂದು ಉಪಯುಕ್ತ ಮಾಹಿತಿ

ಎಸ್. ಎಸ್.ಎಲ್.ಸಿ. ವಿದ್ಯಾರ್ಥಿ ಜೀವನದ ಒಂದು ಪ್ರಮುಖ ಘಟ್ಟ. ಈ ಸಮಯದಲ್ಲಿ ಪಾಲಕರ ಜವಾಬ್ದಾರಿ ಮಹತ್ತರವಾದುದ್ದು. ಪಾಲಕರು ತಮ್ಮ ಮಕ್ಕಳಿಗೆ ಮಾರ್ಗದರ್ಶನ ನೀಡುವಾಗ ಅವರ ಬುದ್ಧಿವಂತಿಕೆ, ಆ ವಿಷಯದಲ್ಲಿ (ಕ್ಷೇತ್ರ) ಅವರು ಅರ್ಹರೇ ಹಾಗೂ ಅಭಿಪ್ರಾಯ ಅವಶ್ಯಕತೆ ತಿಳಿದು ವಿಮರ್ಶಿಸಿ ನಂತರ ಆಯ್ಕೆ ಮಾಡಬೇಕು. ಈಗಂತೂ ನೂರಾರು ವಿವಿಧ ಕೋರ್ಸುಗಳು, ತರಬೇತಿಯ ಶಿಕ್ಷಣ ವಿಭಾಗಗಳು ಲಭ್ಯವಿದ್ದು ವಿಪುಲ ಅವಕಾಶಗಳಿವೆ. ಕಾರಣ ತಮ್ಮ ಮಕ್ಕಳ ಆಸಕ್ತಿ- ಬುದ್ಧಿಮತ್ತೆಯನ್ನು ಆರಂಭದಿಂದಲೇ ಗಮನಿಸಿ ಅವರೇನಾಗಬೇಕೋ ಹಾಗೇ ಆಗಲಿ, ನೀವು ಒತ್ತಡ ತರಬೇಡಿ. ಮಕ್ಕಳಿಗೆ ಮುಂದೆ ಲಭ್ಯವಿರುವ ಶಿಕ್ಷಣಾವಕಾಶಗಳನ್ನು ವಿವರಿಸಿ ಅವರಿಗೆ ಆರಿಸಿಕೊಳ್ಳಲು ಪ್ರೇರೇಪಿಸಿ ನೀವು ಮಾರ್ಗದರ್ಶಕರಾಗಿ .

### ಎಸ್. ಎಸ್. ಎಲ್. ಸಿ. ನಂತರ ಮುಂದೇ ...

1. ಪಿಯುಸಿ : ವಿಜ್ಞಾನ - ವಾಣಿಜ್ಯ - ಕಲಾ ವಿಭಾಗ (ಅವಧಿ ಎರಡು ವರ್ಷ)
2. ಡಿಪ್ಲೋಮಾ: ತಾಂತ್ರಿಕೇತರ ವಿಭಾಗ (ಅವಧಿ ಮೂರು ವರ್ಷ)ಕೆಮಿಕಲ್, ಮೆಟಲರ್ಜಿಕಲ್, ಪಾಲಿಮರ್ ಟೆಕ್ನೋಲಜಿ, ಟೆಕ್ಸಟೈಲ್ ಟೆಕ್ನೋಲಜಿ, ಪ್ರಿಂಟಿಂಗ್ ಟೆಕ್ನೋಲಜಿ, ಕಂಪ್ಯೂಟರ್, ರೆಫ್ರಿಜರೇಷನ್ ಮತ್ತು ಎರ್‌ಕಂಡಿಷನಿಂಗ್ , ಕಾಸ್ಟ್ಯೂಮ್ ಡಿಸೈನ್ ಮತ್ತು ಡ್ರೆಸ್ ಮೆಕಿಂಗ್ , ಲ್ಯಾಬ್ರರಿ ಸಾಯಿನ್ಸ, ಸಿವಿಲ್, ಇಲೆಕ್ಟ್ರಿಕಲ್, ಮೆಕಾನಿಕಲ್.
3. ಪಿಯುಸಿ ಡಿಪ್ಲೋಮಾ(ಜೆಓಸಿ): ತಾಂತ್ರಿಕ, ಆರೋಗ್ಯ, ಅರೆ ವೈದ್ಯಕೀಯ ಕೃಷಿ, ಸಂಬಂಧಿತ ವಾಣಿಜ್ಯ ಕಛೇರಿ ಸೇವೆ (ಅವಧಿ ಎರಡು ವರ್ಷ) ಎಕ್ಸರೆ ಟೆಕ್ನಿಷಿಯನ್, ಲ್ಯಾಬೊರೆಟರಿ ಟೆಕ್ನಿಷಿಯನ್, ಕಂಪ್ಯೂಟರ್ ಟೆಕ್ನಿಕ್, ಹಾರ್ಟಿಕಲ್ಚರ್, ಸೆರಿಕಲ್ಚರ್,ಡೇರಿಂಗ್, ಇಲೆಕ್ಟ್ರಿಕಲ್ಸ್.
4. ಟೂಲ್ ಮತ್ತು ಡೈ ಮೆಕಿಂಗ್: (ಅವಧಿ ಮೂರರಿಂದ ನಾಲ್ಕುವರೆ ವರ್ಷ)
5. ಐಟಿಐ: ಇಂಡಸ್ಟ್ರಿಲಯಲ್ ಟ್ರೇನಿಂಗ್ ಇನ್‌ಸ್ಟಿಟ್ಯೂಟ್ ( ಒಂದು ಮತ್ತು ಎರಡು ವರ್ಷ)
6. ಪೂರ್ಣಾವಧಿ ಅಪ್ರೆಂಟಿಸ್ : (ಅವಧಿ ಮೂರು ಅಥವಾ ನಾಲ್ಕು ವರ್ಷ)
7. ರಕ್ಷಣಾ ವಿಭಾಗ: ನೌಕಾದಳ, ವಾಯುದಳಕ್ಕೆ ಸೇರಿದ್ದಲ್ಲಿ, ಉತ್ತಮ ಶಿಕ್ಷಣ ಉದ್ಯೋಗ ಸೇವೆ ಕೈತುಂಬ ಸಂಬಳ ಜೊತೆಗೆ ದೇಶಸೇವೆಯ ಅವಕಾಶವಿದೆ.
8. ವಿವಿಧ ಕೋರ್ಸುಗಳು : ಕಮರ್ಷಿಯಲ್ ಆರ್ಟ್ಸ್ (ಐದು ವರ್ಷ) , ಕೃಷಿ ಇಂಜಿನಿಯರಿಂಗ್ (ಮುರು ವರ್ಷ), ಡಿಪ್ಲೋಮಾ ಇನ್ ಪಾರ್ಮಸಿ ( ಎರಡು ವರ್ಷ), ರೆಡಿಯೋ ಅಥವಾ ಟೇಲರಿಂಗ್ ( ಆರು ತಿಂಗಳು), ಆಹಾರ ಸಂಸ್ಕರಣೆ ( ಒಂದು ವರ್ಷ)

(ಇನ್ನೂ ಅನೇಕ ವಿಷಯ ವಿಭಾಗಗಳು ಇವೆ. ಇಲ್ಲಿ ಆಯ್ದ ಕೆಲವನ್ನು ಮಾತ್ರ ನೀಡಿದ್ದೇವೆ.)

### ಪಿ.ಯು.ಸಿ ನಂತರ ಮುಂದೇನು?

ವಿದ್ಯಾರ್ಥಿಗಳು ತಮ್ಮ ಬುದ್ದಿವಂತಿಕೆ ಮತ್ತು ಸಾಮರ್ಥ್ಯವನ್ನು ಗಮನಿಸಿ ಮುಂದುವರೆಯಬೇಕು. ತನ್ನ ಭವಿಷ್ಯದ ಗುರಿಯನ್ನು ನಿರ್ಧರಿಸಿ ಅದರಂತೆ ಮುಂದಿನ ವಿದ್ಯಾಭ್ಯಾಸವನ್ನು ಆರಿಸಿ ಕೊಳ್ಳುವುದು ಮಹತ್ವದ್ದಾಗಿದೆ. ಪಿಯುಸಿ ಮುಗಿಸಿದ ನಂತರ ಮುಂದೆ ಯಾವ ದಿಶೆಯಲ್ಲಿ ಹೋಗುವುದು ಎಂಬುದನ್ನು ಸಂಕ್ಷಿಪ್ತವಾಗಿ ಇಲ್ಲಿ ನೀಡಲಾಗಿದೆ.

1. ಬಿ. ಎ./ ಬಿ. ಎಸ್. ಸಿ./ ಬಿ. ಕಾಂ./ ಲಾ : (ಅವಧಿ ಮೂರು ವರ್ಷ)
2. ಅ) ಬಿ.ಎಸ್.ಸಿ. (ಕೃಷಿ), ಬಿ.ಎಸ್.ಸಿ. (ತೋಟಗಾರಿಕೆ), ಬಿ.ಎಸ್.ಸಿ(ರೇಷ್ಮೆ), ಬಿ.ಎಸ್.ಸಿ. (ಡೇರಿ), ಬಿ.ವಿ.ಎಸ್.ಸಿ. (ಪಶು ವೈದ್ಯಕೀಯ) : ನಾಲ್ಕು ವರ್ಷ
   ಬ) ಬಯೋಟೆಕ್ನಾಲಜಿ: ಮೂರು ವರ್ಷ
3. ಅ) ಎಂ.ಬಿ.ಬಿ.ಎಸ್. (ವೈದ್ಯಕೀಯ) : ಅವಧಿ ಐದುವರೆ ವರ್ಷ.
   - ಅಲೋಪಥಿ: ಬ್ಯಾಚುಲರ್ ಆಪ್ ಮೆಡಿಸಿನ್ ಎಂಡ್ ಬ್ಯಾಚುಲರ್ ಆಪ್ ಸರ್ಜರಿ.
   - ಬ್ಯಾಚುಲರ್ ಆಪ್ ಆಯುರ್ವೇದಿಕ ಮೆಡಿಸಿನ್ ಎಂಡ್ ಸರ್ಜರಿ
   - ಬ್ಯಾಚುಲರ್ ಆಪ್ ಹೋಮಿಯೋಪಥಿಕ್, ಮೆಡಿಸಿನ್ ಎಂಡ್ ಸರ್ಜರಿ
   - ಬ್ಯಾಚುಲರ್ ಆಪ್ ಯುನಾನಿ ಮೆಡಿಸಿನ್ ಎಂಡ್ ಸರ್ಜರಿ

   ಬ) ಡೆಂಟಲ್ (ದಂತ) ವೈದ್ಯಕೀಯ : ಅವಧಿ ನಾಲ್ಕು ವರ್ಷ
   ಕ) ಬ್ಯಾಚುಲರ್ ಆಪ್ ಪಾರ್ಮಸಿ (ಔಷಧಿ) : ಅವಧಿ ನಾಲ್ಕು ವರ್ಷ
   ಡ) ನರ್ಸಿಂಗ್ : ಅವಧಿ ಮೂರು ವರ್ಷ
4. ಬಿ. ಇ./ಬಿ.ಟೆಕ್. (ಬ್ಯಾಚುಲರ್ ಆಪ್ ಇಂಜಿನಿಯರಿಂಗ್) : ಅವಧಿ ನಾಲ್ಕು ವರ್ಷ
   ಕಂಪ್ಯೂಟರ್, ಇನ್‌ಪಾರ್ಮೇಶನ್ ಟೆಕ್ನಾಲಜಿ, ಪ್ರಿಂಟಿಂಗ್ ಟೆಕ್ನಾಲಜಿ, ಇನಸ್ಟ್ರುಮೆಂಟೇಶನ್ ಟೆಕ್ನಾಲಜಿ, ಕೆಮಿಕಲ್, ಮೆಕ್ಯಾನಿಕಲ್ ಇಲೆಕ್ಟ್ರಿಕಲ್, ಸಿವಿಲ್, ಟೆಕ್ಸಟೈಲ್, ಬಯೋ ಮೆಡಿಕಲ್ ಇತ್ಯಾದಿ.
5. ಮೆನೆಜ್‌ಮೆಂಟ್ ಕೋರ್ಸ : ಅವಧಿ ಮೂರು ವರ್ಷ
   ಅ) ಹೆಲ್ತ ಸರ್ವಿಸ್, ಪ್ರೊಡಕ್ಷನ್, ಪರ್ಸನಲ್, ಮಾರ್ಕೆಟಿಂಗ್, ರೂರಲ್, ಫಾರೆಸ್ಟರಿ, ಫೈನಾನ್ಸ್, ಅಪರೆಶನ್ ರಿಸರ್ಚ, ಹೊಟೆಲ್ ಮ್ಯಾನೇಜ್‌ಮೆಂಟ್ ಇತ್ಯಾದಿ.
   ಬ) ಬ್ಯಾಚುಲರ್ ಆಪ್ ಕಂಪ್ಯೂಟರ್ ಅಪ್ಲಿಕೇಶನ್ (ಬಿಸಿಎ) : ಅವಧಿ ಮೂರು ವರ್ಷ
   ಕ) ಬ್ಯಾಚುಲರ್ ಆಪ್ ಲೈಬ್ರರಿ ಸೈನ್ಸ್(ಬಿಲಿಬ್): ಅವಧಿ ಮೂರು ವರ್ಷ
6. ರಕ್ಷಣಾ ವಿಭಾಗ: ಭೂ-ವಾಯು-ನೌಕಾದಳಕ್ಕೆ ಸೇರಿದ್ದಲ್ಲಿ ಅತ್ಯುತ್ತಮ ಶಿಕ್ಷಣ, ಉದ್ಯೋಗ , ಕೈತುಂಬ ಸಂಬಳ ಜೊತೆಗೆ ದೇಶ ಸೇವೆಯ ಅವಕಾಶವಿದೆ.

(ಇನ್ನೂ ಅನೇಕ ವಿಷಯ ವಿಭಾಗಗಳಿವೆ. ಇಲ್ಲಿ ಆಯ್ದು ಕೆಲವನ್ನು ಮಾತ್ರ ನೀಡಿದ್ದೇವೆ.)

## ಶಿಕ್ಷಣದಿಂದ ವಂಚಿತರಾದ ಸ್ವಾವಲಂಬಿಗಳಿಗೆ ಸುವರ್ಣ ಅವಕಾಶ

ಹೊಟ್ಟೆ ಪಾಡಿಗಾಗಿ ಬೇರೆಯವರಲ್ಲಿ ನೌಕರಿ ಚಾಕರಿಗೆ ಬೇಡಿ ಕಾಡಿ ಸುತ್ತುತ್ತಿರುವ ಯುವಕರಲ್ಲಿ ಅನೇಕರಿಗೆ ಪ್ರಾರಂಭಿಕ ಶಿಕ್ಷಣ ಇಲ್ಲದಿರುವುದು ಸರ್ವೇ ಸಾಮಾನ್ಯ. ಶಾಲಾ ಶಿಕ್ಷಣ ವಂಚಿತರಾದವರಿಗೆ ಸ್ವಂತ ಉದ್ಯೋಗ ಮಾಡಿ ಜೀವಿಸಲು ತರಬೇತಿ ನೀಡುವ ವಿಶಿಷ್ಟ ಕಾರ್ಯ ರುಡ್‌ಸೆಟ್ ಗ್ರಾಮೀಣಾಭಿವೃದ್ಧಿ ಮತ್ತು ಸ್ವ ಉದ್ಯೋಗ ತರಬೇತಿ ಕೇಂದ್ರ ಮಾಡುತ್ತಿದೆ.

ಉತ್ತರ ಕನ್ನಡ ಜಿಲ್ಲೆಯ 18-35 ವರ್ಷದೊಳಗಿನ ಓದು - ಬರೆಯಲು ಬರುವ ಯಾರೂ ತಮ್ಮ ಆಸಕ್ತಿ ಇರುವ ವಿಷಯದಲ್ಲಿ ಸ್ವಂತ ಉದ್ಯೋಗಕ್ಕೆ ಪೂರಕವಾಗುವ ತರಬೇತಿಯನ್ನು ಪಡೆಯಬಹುದು.

ನಿರ್ದೇಶಕರು : **ರುಡ್‌ಸೆಟ್, ಪೆರಂಪಳ್ಳಿ, ಶಿವಳ್ಳಿ ಉಡುಪಿ.**
ದೂರವಾಣಿ : 08252-70582/25582 ಇವರಿಗೆ ಸಂಪರ್ಕಿಸಬಹುದು.

# ಪ್ರಾಥಮಿಕ ಶಾಲೆಗಳಲ್ಲಿ ಕೊಂಕಣಿ ಭಾಷಾ ಶಿಕ್ಷಣ ಯೋಜನೆ



ಮಾನ್ಯರು ವಿಶ್ವಕೊಂಕಣ ಸಮ್ಮೇಳನ ಮತ್ತು ವಿಶ್ವ ಸಾರಸ್ವತ ಸಮ್ಮೇಳನಕ್ಕೆ ಸಂಚಾಲಕರಾಗಿ ಸೇವೆ ಸಲ್ಲಿಸಿರುತ್ತಾರೆ.

ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಮಂಗಳೂರು ಇವರು ಕಳೆದ ನಾಲ್ಕು ವರ್ಷಗಳಿಂದ ಕೊಂಕಣಿ ಜನರು ಆಡಳಿತ ಹೊಂದಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮಾತೃಭಾಷೆ ಕೊಂಕಣಿಯಲ್ಲಿ ಪ್ರಾಥಮಿಕ ಶಿಕ್ಷಣ ನೀಡುವ ಯೋಜನೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.

## ಮಾತೃಭಾಷೆಗಳಲ್ಲಿ ಶಿಕ್ಷಣ ನೀಡಿಕೆ ಏಕೆ?

ಜಗತ್ತಿನಾದ್ಯಂತ ಹೆಸರಾಂತ ಶಿಕ್ಷಣ ಪಂಡಿತರು ಮಾತೃಭಾಷೆಗಳಲ್ಲಿ ಶಿಕ್ಷಣ ನೀಡುವುದರಿಂದ ಮಕ್ಕಳು ಅತ್ಯಂತ ಸುಲಭವಾಗಿ ಮತ್ತು ಸಹಜವಾಗಿ ಬುದ್ಧಿವಿಕಸನ ಹೊಂದಲು ಸಾಧ್ಯವಾಗುತ್ತದೆ ಎಂದು ಕಂಡುಕೊಂಡಿದ್ದಾರೆ. ಅವರವರ ಸಂಸ್ಕೃತಿ , ಸಂಸ್ಕಾರ ಮತ್ತು ಹಿರಿಯರ ಆದರ್ಶಗಳನ್ನು ಮುಂದುವರೆಸಿಕೊಂಡು ಹೋಗಲು ಈ ಶಿಕ್ಷಣ ಪದ್ಧತಿ ಪರಿಣಾಮಕಾರಿಯಾಗಿದೆ. ಆಧುನಿಕ ಶೈಲಿಯ ಇಂಗ್ಲಿಷ ಮಾಧ್ಯಮ ದಿಂದ ಆಂಗ್ಲ ಸಂಸ್ಕೃತಿ ಮತ್ತು ಸಾಹಿತಿಗಳ ಪರಿಚಯವಾಗಬಹುದಷ್ಟೇ! ಆದರೆ ನಮ್ಮ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ, ಪಂಜೆ ಮಂಗೇಶ ರಾವ್ , ಶೆಣೈಗೊಂಯ ಬಾಬ್, ಬಾಕಿಬಾಬ್ ಬೋರ್ಕರ್, ಚಾ.ಪ್ರಾ. ದೊಕೊಸ್ತಾರವರಂತಹ ದೇಶಿಯ ಸಾಹಿತಿಗಳಿಂದ ನಮ್ಮ ಮಕ್ಕಳು ವಂಚಿತರಾಗಬಹುದು. ಆಧುನಿಕ ವಿಜ್ಞಾನ, ಗಣಿತ, ಮತ್ತು ಸಮಾಜ ಶಾಸ್ತ್ರಗಳನ್ನು ಕೊಂಕಣಿಯಲ್ಲಿ ಸುಲಭವಾಗಿ ಮನನಮಾಡಿಕೊಳ್ಳಬಹುದು. ಕೊಂಕಣಿ ಸಾಹಿತ್ಯ ಸಂಸ್ಕೃತಿ ಮತ್ತು ಲೋಕಸಂಗೀತವನ್ನು ಬೆಳಕಿಗೆ ತರಲು ಮಾತೃಭಾಷೆಯಲ್ಲಿ ಶಿಕ್ಷಣ ನೀಡಿಕೆಯ ಅವಶ್ಯಕತೆ ನಿಮಗೂ ಕಂಡಿರಬಹುದು. ಆ ದೃಷ್ಟಿಯಲ್ಲಿ ಕೊಂಕಣಿ ಆಕಾಡೆಮಿ ಹಲವಾರು ಪರಿಣಾಮಕಾರಿ ಕಾರ್ಯಗಳನ್ನು ಮಾಡಿದೆ.

1. 1999 ನೇ ಇಸ್ವಿಯಲ್ಲಿ ಗೋವಾ ರಾಜ್ಯ ಶಿಕ್ಷಣ ಇಲಾಖೆಯ ಅಧಿಕಾರಿಗಳು ಕರ್ನಾಟಕದ ಶಿಕ್ಷಕರು , ಕೇರಳ ವಿದ್ಯಾಸಂಸ್ಥೆಯ ಮುಖಂಡರು ಸೇರಿ ಕರ್ನಾಟಕ ದಲ್ಲಿ ಕೊಂಕಣಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ನೀಡುವ ಬಗ್ಗೆ ಕಾರವಾರದಲ್ಲಿ ಒಂದು ಕಾರ್ಯಾಗಾರ ನಡೆಸಿದರು.
2. 2000ನೇ ಇಸ್ವಿಯ ಅಗಸ್ಟ ತಿಂಗಳಲ್ಲಿ ಮಂಗಳೂರಿನ ಕರ್ನಾಟಕ ರಾಜ್ಯಭಾಷಾ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳ ಮತ್ತು ಕೊಂಕಣಿ ಸಾಹಿತ್ಯ ಅಕಾಡೆಮಿ ಸಹಯೋಗದಲ್ಲಿ ರಾಜ್ಯದ ವಿವಿಧ ಪ್ರದೇಶಗಳ ಕೊಂಕಣಿ ಉಪಾಧ್ಯಾಯರ ಎರಡುದಿನಗಳ ಕಾರ್ಯಾಗಾರ ಮಂಗಳೂರಿನಲ್ಲಿ ನಡೆಯಿತು. ಈ ಕಾರ್ಯಾಗಾರದಲ್ಲಿ ಮೈಸೂರು ಭಾರತೀಯಭಾಷಾ ಸಂಸ್ಥೆಯ ಇಬ್ಬರು ತಜ್ಞರು ಮತ್ತು ಗೋವಾದ ಥಾಮಸ್‌ಸ್ಟೀಫನ್ ಕೊಂಕಣಿ ಕೇಂದ್ರದ ಭಾಷಾ ಸಂಶೋಧಕ ಫಾ/ಪ್ರತಾಪ ನಾಯಕ ಎಸ್. ಜೆ. ಇವರು ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವ ಪದ್ಧತಿಯ ಬಗ್ಗೆ ವಿಸ್ತಾರವಾದ ಮಾಹಿತಿ ನೀಡಿದರು.
3. 2000 ಇಸ್ವಿ ಅಕ್ಟೋಬರ್ ತಿಂಗಳಿನಲ್ಲಿ ಕೊಂಕಣಿ ಆಕಾಡೆಮಿ ಕಛೇರಿಯಲ್ಲಿ ಭಾರತೀಯ ಭಾಷಾ ಪ್ರತಿಷ್ಠಾನದ ಭಾಷಾತಜ್ಞರು ಮತ್ತು ಕರ್ನಾಟಕದ ಕೊಂಕಣಿ ಉಪಾಧ್ಯಾಯರ ನಡುವೆ ಕೊಂಕಣಿ ಶಾಲೆಗಳಲ್ಲಿ ಪಠ್ಯ ಪುಸ್ತಕ ತಯಾರಿಸುವುದು ಎಂಬ ವಿಷಯದ ಮೇಲೆ ಚರ್ಚೆ ನಡೆಯಿತು.

4. 2001 ನೇ ಮಾರ್ಚ ಮತ್ತು ಎಪ್ರಿಲ್ ತಿಂಗಳಿನಲ್ಲಿ ಭಾರತೀಯ ಭಾಷಾ ಪ್ರತಿಷ್ಠಾನದ ಆಶ್ರಯದಲ್ಲಿ ಮೈಸೂರಿನಲ್ಲಿ ಕೊಂಕಣಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ನೀಡಲು ಪುಸ್ತಕವನ್ನು ತಯಾರಿಸುವ ಹತ್ತು ದಿನಗಳ ಕಾರ್ಯಾಗಾರ ನಡೆಯಿತು. ಮಂಗಳೂರು, ಪುತ್ತೂರು, ಕಾರ್ಕಳ, ಕುಂದಾಪುರ ಮತ್ತು ಕುಮಟಾಗಳಿಂದ ಕೊಂಕಣಿ ಉಪಾಧ್ಯಾಯರು ಭಾಗವಹಿಸಿದರು. ಇವರು ಕೊಂಕಣಿಯಲ್ಲಿ ಪ್ರಾಥಮಿಕ ಶಿಕ್ಷಣಕ್ಕಾಗಿ ವಿಧವಿಧವಾದ ವಿಷಯಗಳ ಮೇಲೆ ಕಥೆ , ಕವನ ರಚಿಸಿದ್ದಾರೆ.

5. 2001ನೇ ಮೇ ತಿಂಗಳಲ್ಲಿ ಭಾಷಾ ಪ್ರತಿಷ್ಠಾನದ ಅಧಿಕಾರಿಗಳು ಮತ್ತು ಕೊಂಕಣಿ ಉಪಾಧ್ಯಾಯರು ಮೈಸೂರಿನಲ್ಲಿ ಸಭೆ ಸೇರಿ ಅವರು ಸಿದ್ಧಗೊಳಿಸಿದ ಪುಸ್ತಕಕ್ಕೆ ಅಂತಿಮರೂಪರೇಶೆ ನೀಡಿ ಕೊಂಕಣಿ ಸಾಹಿತ್ಯ ಅಕಾಡೆಮಿಗೆ ಹಸ್ತಾಂತರಿಸಿದ್ದಾರೆ.

ಈ ಪುಸ್ತಕವು ಮಕ್ಕಳಿಗೆ ಕೊಂಕಣಿ ಕಲಿಯುವ ವಿಷಯದಲ್ಲಿ ಮಹತ್ವದ ಪಾತ್ವನ್ನು ವಹಿಸುವುದು. ಕೊಂಕಣಿ ಮಾತೃಭಾಷೆಯವರು ಈ ಪುಸ್ತಕವನ್ನು ಉಪಯೋಗಿಸಿ ಅವರ ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡಲು ಹೆಮ್ಮೆಪಡುವರು ಎಂಬ ವಿಶ್ವಾಸವನ್ನು ಹೊಂದಲಾಗಿದೆ.

ದಿನಾಂಕ 20-8-1992 ಭಾರತದ ಲೋಕಸಭೆಯಲ್ಲಿ ಕೊಂಕಣಿ **ರಾಷ್ಟ್ರೀಯ ಭಾಷೆ** ಎಂದು ಸಂವಿಧಾನದ ಎಂಟನೇ ಪರಿಚ್ಛೆದದಲ್ಲಿ ಸೇರ್ಪಡೆಯಾದ ಸುದಿನ. ಈ ಚಾರಿತ್ರಿಕ ದಿನದ ಸವಿ ನೆನಪಿನಲ್ಲಿ ದಿ. 20-8-2001 ರಂದು ಕೊಂಕಣಿ ಕಲಿಯಲು ಪ್ರಪ್ರಥಮ ಕೊಂಕಣಿ ಕಲಿಯುವ ಪುಸ್ತಕ **ಕೊಂಕಣಿ ಕಳಿೊ** ವನ್ನು ಪ್ರಕಾಶನಕ್ಕೆ ತರುತ್ತಿದೆ. ನಮ್ಮ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಕೊಂಕಣಿ ಜನರ ಆಡಳಿತವಿರುವ ಬಾಲವಾಡಿ ಎಲ್.ಕೆ.ಜಿ., ಯು.ಕೆ.ಜಿ. ವರ್ಗದಲ್ಲಿ ಕಲಿಯುತ್ತಿರುವ 5000 ವಿಧ್ಯಾರ್ಥಿಗಳಿಗೆ ಕೊಂಕಣಿ ಶಿಕ್ಷಣ ದೊರಕಿಸಲು ಕೊಂಕಣಿ ಅಕೆಡಮಿ ಪ್ರಯತ್ನ ಮಾಡಲಿದೆ. ಕೊಂಕಣಿ ಮಾತೃಭಾಷೆಯನ್ನು ಉಳಿಸಿ ಬೆಳೆಸಲು ಮತ್ತು ಜ್ಞಾನವನ್ನು ಸುಲಭವಾಗಿ ಸಂಪಾದಿಸಲು ಸಹಾಯವಾಗುವಂತೆ ಉದಾರ ಮನಸ್ಸಿನ ಪ್ರೋತ್ಸಾಹವನ್ನು ಕೊಂಕಣಿ ಅಕಾಡೆಮಿ ಶಿಕ್ಷಣ ಸಂಸ್ಥೆಯಿಂದ ಮತ್ತು ಪಾಲಕರಿಂದ ಬಯಸುತ್ತದೆ.

**ಬಸ್ತಿ ವಾಮನ ಶೆಣೈ**
ಅಧ್ಯಕ್ಷರು
ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ
ಮಂಗಳೂರು

# ಗೌಡ ಸಾರಸ್ವತ ಬ್ರಾಹ್ಮಣ ಸಮಾಜ ವಿವಾಹ ಸಹಾಯಕ ಘಟಕ

## ( Goud Saraswat Brahmin Marriage Assistance Bureau)

ಪೂರ್ಣ ಮಾಹಿತಿಗಾಗಿ ಸಂಪರ್ಕಿಸುವ ವಿಳಾಸಗಳು

| | | |
|---|---|---|
| **Shripad N. Baleri**<br>***Goutham Traders***<br>BHATKAL<br>Phone : 26177 | **Suresh N. Kamat**<br>"Shanta Durga Nilay"<br>98, Sirur Park, HUBLI<br>Phone : 374556 | **Premkumar G. Pai**<br>"SRINIVAS" 1st Main<br>1st Cross, Vijaynagar<br>SIRSI<br>Phone : 24052 |
| **Suder G. Kamath**<br>***Shanta Durga Cloth Stores***<br>MURDESHWAR<br>Phone : 68555/ 68766 | **Shrinivas D. Mahale**<br>***Gajanan Stores***<br>SHIRALI<br>Phone : 28026 / 28226 | **K.G. Saraf FSC**<br>Resi : Guru Prasad<br>Plot No. 192, Sion (East)<br>MUMBAI- 400022<br>Tele : (022) 4091709<br>Tele Fax-(022) 4130371<br>e-mail -ksaraf@mantraonline.com |
| **Vishnu P. Shanbhag**<br>***Hegdeker Hardware***<br>KUMTA<br>Phone : 22151/ 22353 | **Vital V. Pai**<br>New Shop<br>HONAVAR<br>Phone : 20397 / 20897 | |
| **H. N. Pai**<br>Sri Hari Nivas, HALDIPUR<br>Tq., Honnavar - 581 327<br>Phone : (08387) 54376 | **Prasanna L. Shanbhag**<br>General Mechants<br>KARWAR<br>Phone : 20254 / 26352 | **B. N. Baliga**<br>***G.S.B. Matrimonial Trust***<br>Ship No. 7 Sri Jayaddeva<br>Hotel Building<br>5th main Gandhinagar<br>BANGALORE -560009<br>Ph.(O) 226016 (R) 3351407<br>Internet : www.soirika.com |
| **Raghuveer N. Balgi**<br>Kirana Merchants<br>Near Marigudi, BHATKAL<br>Phone : 68566 / 60066 | **Dr. Ramesh V. Saraf**<br>***Saraf Clinic***<br>SHIRALI<br>Phone : 28346 / 28302 | **Suresh Krishna Prabhu**<br>***Mahalaxmi Ravalanath Traders***<br>Near Mahavishnu Temple<br>Rayar Pete.<br>SIRSI ( N. K.) |
| **Shrikant S. Pai**<br>***Pai Tea Stores***<br>KUMTA<br>Phone : 23162 | **Vithal Ram Kamat**<br>***Maruti Sweets & Snaks***<br>Near Ram Mandir<br>HONAVAR. Phone : 21671 | |

# ಜಿ.ಎಸ್.ಬಿ. ಯುವ ಸಂಘಟನೆಯ ಅನಿವಾರ್ಯತೆ

ಅಲ್ಪಸಂಖ್ಯಾತ ಕೊಂಕಣಿಗರಿಗೆ ಸ್ಥಳೀಯ ಜನರೊಂದಿಗೆ ತೀವ್ರವಾಗಿ ಸ್ಪರ್ಧಿಸಬೇಕಾದ್ದರಿಂದ ಬುದ್ಧಿಚಾತುರ್ಯ, ವಿದ್ಯೆ, ದುಡಿಮೆಗಳೇ ಇವರ ಬಂಡವಲಾಗಿ ನಿಂತವು. ಹೀಗಾಗಿ ಕೊಂಕಣಿ ಸಮಾಜದಲ್ಲಿ ಈ ಗುಣಗಳಿಗೆ ವಿಶೇಷವಾಗಿ ಮಹತ್ವಕೊಡಲಾಗುತ್ತದೆ. ಶಾಲೆ ಕಲಿಯುತ್ತಿರುವ ಮಗುವಿಗೂ ಹಿರಿಯರು ವ್ಯವಹಾರದ ಬಗ್ಗೆ ತಿಳುವಳಿಕೆ ನೀಡುತ್ತಾರೆ. ಅವ್ಯವಹಾರದ ಕೆಲಸ ಮಾಡಿದಲ್ಲಿ ಬೆದರಿಕೆ ಹಾಕುತ್ತಾರೆ. ಹಣ ಕೊಡುವಾಗ, ತೆಗೆದುಕೊಳ್ಳುವಾಗ ಲೆಕ್ಕ ಮಾಡಲೇ ಬೇಕು. ಹಣ ಒಂದು ಕೈಯಿಂದ ಇನ್ನೊಂದು ಕೈಗೆ ಓಡಿದಾಗ ಪಾವತಿಯನ್ನು ಪಡೆಯಲೇಬೇಕು. ನಾಳೆ ಒಗೆಯುವ ಹಣ್ಣನ್ನು ಇಂದು ಖರೀದಿಸಬಾರದು. ವ್ಯಾಪಾರಕ್ಕೆ ಪರಿಚಯ, ನೆಂಟಸ್ತಿಕೆ, ಅಡ್ಡಬರಬಾರದು ಹತ್ತು ರೂಪಾಯಿಗೆ ಹನ್ನೊಂದು ಮಾಡಬೇಕೇ ಹೊರತು ಒಂಬತ್ತಲ್ಲ ಗಳಿಕೆಯ ಹಣಕ್ಕಿಂತ ಶೇಖರಿಸಿದ ಹಣ ತಮ್ಮದೆಂದು ನಂಬಬೇಕು - ಇತ್ಯಾದಿ ಕಿವಿಮಾತುಗಳು ಕಿರಿಯರಿಗೆ ಹಿರಿಯರಿಂದ ದೊರೆಯುತ್ತವೆ. ಎಂಥ ಬಡವನೂ ಮಕ್ಕಳ ಶಿಕ್ಷಣಕ್ಕೆ ಎಲ್ಲಿಲ್ಲದ ಮಹತ್ವಕೊಡುತ್ತಾನೆ. ಕೊಂಕಣಿಗರು ಬುದ್ಧಿಜೀವಗಳಿದ್ದಂತೆ ಶ್ರಮಜೀವಿಗಳೂ ಹೌದು. ಬೆಳಗಿನಿಂದ ರಾತ್ರಿಯವರೆಗೆ ದುಡಿಯುತ್ತಲೇ ಇರುತ್ತಾರೆ.

ಗೋವಾದಲ್ಲಿ ಅನೇಕಕಾಲ ತೆಳವೂರಿದ್ದ ನಮ್ಮ ಜನ ಸುಮಾರು ನಾಲ್ಕರೂ ವರ್ಷಗಳ ಹಿಂದೆ ಪೋರ್ಚುಗೀಸರು ಗೋವೆಯನ್ನು ವಶಪಡಿಸಿಕೊಂಡು ಹಿಂದುಗಳನ್ನೆಲ್ಲ ಬಲತ್ಕಾರವಾಗಿ ಧರ್ಮಾಂತರ ಮಾಡಲು ಪ್ರಾರಂಭಿಸಿದಾಗ ನಮ್ಮ ಜನ ಅಲ್ಲಿಂದ ಕಾಲು ಕೀಳಬೇಕಾಯಿತು. ಕಳೆದ ಶತಮಾನದಿಂದ ಭಾರತದ ಮೂಲೆ ಮೂಲೆಗಳಲ್ಲಿ ದೊಡ್ಡದೊಡ್ಡ ನಗರಗಳಲ್ಲಿ ಕೊಂಕಣಿಗಳು ಹರಡಿಕೊಂಡಿದ್ದಾರೆ. ಸಾರಸ್ವತರು ವಾಸಮಾಡಿದ್ದ ಸಣ್ಣ ಗ್ರಾಮವೇ ಆಗಿರಲಿ ಅಥವಾ ದೊಡ್ಡನಗರವೇ ಆಗಿರಲಿ, ಅವರು ನೆಲೆನಿಂತಲ್ಲಿ ಅವರ ಸಮಾಜದ ಒಂದು ದೇವಸ್ಥಾನ ಅಥವಾ ಸಮಾಜಮಂದಿರ ಕಂಡು ಬರುವುದು ವಿಶೇಷ.

ಸಾರಸ್ವತರ ಸಂಘಟನೆ ಕೇವಲ ಆಯಾ ಊರಿನ ದೇಗುಲ ಅಥವಾ ಸಮಾಜಕ್ಕೆ ಸೀಮಿತವಾಗಿದ್ದು, ರಾಷ್ಟ್ರ, ರಾಜ್ಯ ಅಥವಾ ಜಿಲ್ಲಾ ಮಟ್ಟದಲ್ಲಿ ಯಾವುದೇ ಬಲಿಷ್ಠ ಸಂಘಟನೆಯಿಲ್ಲ. ಸ್ವಭಾವತಃ ಅನ್ಯಸಮಾಜದವರೊಡನೆ ಮತ್ತು ಭಾಷಿಕರೊಡನೆ ಹೊಂದಿಕೊಂಡು ಹೋಗುವ ಗುಣ ಹೊಂದಿರುವುದರಿಂದ ಕೊಂಕಣಿಗರು ಅನಾಥಪ್ರಜ್ಞೆಯನ್ನು ಬೆಳೆಸಿಕೊಂಡಿದ್ದು ಇಲ್ಲ. ಆದರೆ ಅಶಕ್ತ ಸಂಘಟನೆಯ ನಿಮಿತ್ತ ರಾಜಕೀಯದಲ್ಲಿ ಅತಂತ್ರತೆಯನ್ನು ಅನುಭವಿಸಿದ್ದಾರೆ. ಈ ಸಮುದಾಯಕ್ಕೆ ಸರ್ಕಾರದಿಂದ ಯಾವುದೇ ಸಹಾಯಸಿಗದ ಕಾರಣ, ವಿದ್ಯೆ ಮತ್ತು ಬುದ್ಧಿಮತೆ ಅವರ ಆಸ್ತಿಯಾಗಿದೆ.

ಉತ್ತರ ಕನ್ನಡದಲ್ಲಿ ವ್ಯಾಪಾರವನ್ನೇ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡ ಜಿ.ಎಸ್.ಬಿ. ಗಳು ಅನ್ಯ ಸಮಾಜದವರು ಸಹ ವ್ಯಾಪಾರದಲ್ಲಿ ತೊಡಗಿರುವುದರಿಂದ ತಮ್ಮ ಆಸ್ತಿತ್ವದ ದೃಷ್ಟಿಯಿಂದ ನೂತನ ಉದ್ಯೋಗಾವಕಾಶಗಳನ್ನು ಹುಟ್ಟಹಾಕಬೇಕಾಗಿದೆ. ಕೃಷಿ ತೋಟಗಾರಿಕೆ, ಪ್ರವಾಸೋದ್ಯಮ, ಮತ್ಸೋದ್ಯಮ, ಕೈಗಾರಿಕೆಗಳಲ್ಲಿ ತೊಡಗಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಕೊಂಕಣಿ ಕುಟುಂಬಗಳಲ್ಲಿ ಎಂದಿಗಿಂತ ಹೆಚ್ಚು ನಿರುದ್ಯೋಗ ಕಂಡುಬರುತ್ತಿದೆ. ಬಡತನ, ವರದಕ್ಷಿಣೆಯ ಪಿಡುಗು ಅಂತರಜಾತಿಯ ವಿವಾಹ, ಮಾದಕ ವಸ್ತುಗಳ ಸೇವನೆಗಳಂತಹ ಹೊಸ ಹೊಸ ಸಮಸ್ಯೆಗಳು ಎದುರಾಗುತ್ತಿವೆ. ಉಚ್ಚಮಟ್ಟದ ಶಿಕ್ಷಣ ಕಡ್ಡಾಯವಾಗುತ್ತಿದೆ. ಬುದ್ಧಿವಂತ ಬಡಹುಡುಗರಿಗೆ ಶಿಕ್ಷಣ ಮುಂದುವರೆಸಲು ಆರ್ಥಿಕ ಸಮಸ್ಯೆ ಎದುರಾಗತ್ತಿದ್ದು, ಶಿಕ್ಷಣ, ಔಷಧೋಪಚಾರ, ವಿವಾಹನೆಂಟಸ್ಥನಗಳಂತಹ ಸಮಾಜಕಾರ್ಯಗಳಲ್ಲಿ ಸಂಪರ್ಕ ಮತ್ತು ಸಂಘಟನೆಯ ಅವಶ್ಯಕತೆಯಿಂದ ವ್ಯಕ್ತಿ ವಿಕಸನ ಮತ್ತು ಸ್ಪರ್ಧಾತ್ಮಕ ಜಗತ್ತಿನಲ್ಲಿ ಪ್ರಾಮುಖ್ಯತೆಯನ್ನು ಹೊಂದಲು ತಜ್ಞರ ಮಾರ್ಗದರ್ಶನ ಅಗತ್ಯ ಕಂಡುಬಂದಿದೆ.

ಈ ಎಲ್ಲ ಬೇಕು ಬೇಡಗಳನ್ನು ವಿಮರ್ಶಿಸಲು ಜಿಲ್ಲಾ ಮಟ್ಟದ ಯುವ ವೇದಿಕೆಯೊಂದರ ರಚನೆಯ ಅವಶ್ಯಕತೆ ಇರುತ್ತದೆ. ಅದರಂತೆಯೆ ಪ್ರತಿ ಗ್ರಾಮ ಮತ್ತು ತಾಲೂಕಾ ಪ್ರದೇಶದಲ್ಲಿಯೂ ಸಹ ಯುವ ಸಂಘಟನೆಆಗಬೇಕಾಗಿದೆ. ಸರಿಯಾದ ನೀತಿ-ನಿಯಮಾವಳಿ ಮತ್ತು ಉದ್ದೇಶಗಳನ್ನು ಹೊಂದಿರುವ ಜಿಲ್ಲಾ ಮಟ್ಟದ ಯುವಸಂಘಟನೆಯ ಅಡಿಯಲ್ಲಿ ಸಮಾಜಕ್ಕೆ, ತಕ್ಷಣದ ಮತ್ತು ದೂರಗಾಮಿ ಪ್ರಯೋಜನ ಸಿಗುವಂತಹ ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬಹುದು. ಜಿಲ್ಲಾದ್ಯಾಂತ ಇರುವ ಮಠ, ದೇಗುಲಗಳ ಪ್ರಾಂಗಣದಲ್ಲಿ ತಜ್ಞರಿಂದ ವ್ಯಕ್ತಿ ವಿಕಸನ ಶಿಬಿರಗಳನ್ನು ನಡೆಸಬಹುದು. ತಜ್ಞವೈದರ್ಯರಿಂದ ವಿಶೇಷ ವೈದ್ಯಕೀಯ ಶಿಬಿರಗಳನ್ನು ಯೋಗ ಪ್ರಾಣಾಯಾಮ ಮತ್ತು ಆಧ್ಯಾತ್ಮಿಕ ಕಾರ್ಯಕ್ರಮಗಳನ್ನು ನಡೆಸಬಹುದು. ಯುವಕರಿಗೆ ಹೊಸ ಉದ್ಯೋಗವಕಾಶಗಳು ಮತ್ತು ಉದ್ದಿಮೆಗಳ ಬಗ್ಗೆ ಮಾಹಿತಿ ನೀಡಬಹುದು. ಜಿಲ್ಲಾ ಕಮೀಟಿ ರಚನೆಯಿಂದ ಜಿಲ್ಲೆಯಲ್ಲಿಯ ನಮ್ಮ ಸಮಾಜದ ಜನರ ಸಮೀಕ್ಷೆಯನ್ನು ಸುಲಭವಾಗಿ ಕೈಗೊಂಡು ಅಗತ್ಯವಿದ್ದವರಿಗೆ ಸಹಾಯ, ಸಹಕಾರ ನೀಡುವಲ್ಲಿ ಯುವ ವಾಹಿನಿ ಯಶಸ್ವಿ ಮಾಧ್ಯಮವಾಗಬಲ್ಲುದು.

ಸಾಮಾಜಿಕವಾಗಿ ನೈತಿಕವಾಗಿ, ಆರ್ಥಿಕವಾಗಿ,
ಶೈಕ್ಷಣಿಕವಾಗಿ ಗೌಡ ಸಾರಸ್ವತ ಬ್ರಾಹ್ಮಣರು
ಇಷ್ಟೊಂದು ಅಭಿವೃದ್ಧಿ ಸಾಧಿಸಲು
ಒಂದು ಪ್ರೇರಕ ಶಕ್ತಿಯಾಗಿ ನಿಂತಿದ್ದು
ಅವರ ಶತಮಾನಗಳ ಭವ್ಯ ಮಠ ಪರಂಪರೆ.
ಸಾರಸ್ವತ ಬ್ರಾಹ್ಮಣರ ಮಠಗಳಾದ
ಶ್ರೀ ಕೈವಲ್ಯಮಠ ಸಂಸ್ಥಾನ, ಶ್ರೀ ಕಾಶೀಮಠ
ಸಂಸ್ಥಾನ, ಶ್ರೀ ಗೋಕರ್ಣಮಠ ಸಂಸ್ಥಾನ
ಮತ್ತು ಶ್ರೀ ಚಿತ್ರಾಪುರಮಠ ಸಂಸ್ಥಾನ
ಈ ನಾಲ್ಕು ಮಠಗಳು ಒಂದೇ ಆಗಿವೆ.
ಇವುಗಳಲ್ಲಿ ಯಾವುದೇ ಅಭಿಪ್ರಾಯ ಭೇದವಿಲ್ಲ.
ಈ ಮಠಗಳು ಕೇವಲ ಸಾರಸ್ವತ ಬ್ರಾಹ್ಮಣ
ಸಮಾಜ ಮಾತ್ರವಲ್ಲ. ಇಡೀ ಲೋಕದ
ಉದ್ಧಾರ ಮಾಡು, ಸರ್ವಜನರ ಉದ್ಧಾರ
ಮಾಡು ಎಂದು ಪ್ರತಿನಿತ್ಯ ಪೂಜೆಯ
ಸಮಯದಲ್ಲಿ ದೇವರಲ್ಲಿ ಪರಿಪರಿಯಾಗಿ
ದೇವರ ಸ್ತುತಿ ಮಾಡಿ
ಪ್ರಾರ್ಥಿಸುತ್ತಾರೆ.

# ಯುವ ವಾಹಿನಿ



ಉಠಾ ಉಠಾಗೊ ಭಾವ ಭಯಿಣ್ಯಾನೊ
ಜಾಗೃತ್ ಜಾಯಾ ತುಮಿ
ಮೆಳ್ಯಾ ಆಮ್ಮಿ ಉಲ್ಲೊವ್ಯಾ ಆತ್ತಾ
ತೀ ಗೋಡ ಕೊಂಕಣಿ .

ಬಾಂದ್ಯಾ ಆಮ್ಮಿ ಏಕ ಶಕ್ತಿ ತೀ
ಹೀ ಚಿ ಯುವ ವಾಹಿನಿ
ಹೀ ಚಿ ಅಕ್ಷಯವಾಹಿನಿ
ಹೀ ಚಿ ಬಲವಾಹಿನಿ

ಸಂಘಟನೆಂತು ಆಸ್ಸಾ ಮಸ್ತಬಲ
ಕ್ಷಾತ್ರ ತೇಜತೆ ಜಾವುಕಾ
ರಾಮಾಲೆ ಶಕ್ತಿ ಭೀಮಾಲೆ ಭಕ್ತಿ ಕೃಷ್ಣಾಲಿ ಯುಕ್ತಿ ಜಾವುಕಾ
ಸತ್ಯ ಅಹಿಂಸಾ ಶಾಂತಿ ಪ್ರೇಮತೇ ಮಂತ್ರತೇ ಆಮಗೆಲೆ
ಧರ್ಮ ರಕ್ಷಣ ದೇಶ ಸಂರಕ್ಷಣ ಧ್ಯೇಯತೇ ಅಮಗೆಲೆ

ಸಾರಸ್ವತ ಋಷಿ ಸಂತಾನ ಆಮಿ ಗೌಡ ದೇಶಾಚೆ ಉಪಚ
ಆವಯಿ ಅಮಗೆಲಿ ಕೊಂಕಣಿ ಮಾತಾ
ಗೌಡ ಸಾರಸ್ವತ ಆಮಿ.

ಕೊಂಕಣಿ ಅಂಗಣಾಂತು ಫೂಲಿಲೆ ಹೇ ಫೂಲ
ಜಗಾಂತು ಪರಿಮಳ ಭರೊ
ದಿವ್ಯ ತೇಜಾನ ಅತಿ ಉತ್ಸಾಹಾನ
ಸರ್ವಾಲೆ ಮನ ಭರೊ
ಜಯ ಜಯ ಯುವವಾಹಿನಿ
ಜಯ ಜಯ ಅಕ್ಷಯ ವಾಹಿನಿ

ರಚನೆ :- **ಜಯಶ್ರೀ ನಾಯಕ ಎಕ್ಕಂಬಿ**

## ತೃತೀಯ ಜಿ. ಎಸ್. ಬಿ. ಯುವವಾಹಿನಿ ಜಿಲ್ಲಾ ಸಮಾವೇಶದಲ್ಲಿ ರಚಿತಗೊಂಡ ಪ್ರಪ್ರಥಮ ಜಿಲ್ಲಾ ಕಮೀಟಿ

ಅಧ್ಯಕ್ಷರು :
ಶ್ರೀ ರಾಘವ ವಿಷ್ಣು ಬಾಳೇರಿ, ಹೊನ್ನಾವರ

ಕಾರ್ಯದರ್ಶಿಗಳು :
ಶ್ರೀ ರವಿ ಲಕ್ಷ್ಮಣ ಶಾನಭಾಗ, ಯಲ್ಲಾಪೂರ

ಸಂಘಟನಾ ಕಾರ್ಯದರ್ಶಿಗಳು :
ಶ್ರೀ ಸತೀಶ ಹರಿಹರ ಬಳಕೂರ, ಯಲ್ಲಾಪೂರ

ಉಪಾಧ್ಯಕ್ಷರು :
ಶ್ರೀ ಉಪೇಂದ್ರ, ಎಲ್. ಪೈ, ಶಿರಸಿ
ಶ್ರೀ ಗಜಾನನ ಪದ್ಮನಾಭ ಕಿಣಿ, ಕುಮಟಾ

ಸಹ ಕಾರ್ಯದರ್ಶಿಗಳು :
ಶ್ರೀ ಪ್ರಸಾದ ಮಧುಕರ ಹುನ್ಸವಾಡಕರ, ಹಳಿಯಾಳ
ಶ್ರೀ ತುಲಸಿದಾಸ ಸುಬ್ರಾಯ ಕಾಮತ, ಅವರ್ಸಾ

ಕೋಶಾಧ್ಯಕ್ಷರು :
ಶ್ರೀ ವಾಸುದೇವ ರಾಮಚಂದ್ರ ಪೈ, ದಾಂಡೇಲಿ

ಜಿಲ್ಲಾ ಕಮೀಟಿಯ ಸದಸ್ಯರು :
ಶ್ರೀ ರಾಮನಾಥ ಬಾಳಿಗಾ, ಅಂಕೋಲಾ
ಶ್ರೀ ವಿಷ್ಣು ವ್ಹಿ. ಪೈ, ಗೋಕರ್ಣ
ಶ್ರೀ ಶ್ರೀಪಾದ ನಾಗೇಶ ಬಾಳೇರಿ, ಭಟ್ಕಳ
ಶ್ರೀ ಕೂಡ್ಲಆನಂದು ಶಾನಭಾಗ, ಶಿರಸಿ
ಶ್ರೀ ದಿನೇಶ ಜಿ. ಕಾಮತ, ಹೆಗಡೆ
ಶ್ರೀ ಮಾರುತಿ ಎಸ್. ಮಹಾಲೆ, ಮಂಕಿ
ಶ್ರೀ ಭರತ ರಾಮದಾಸ ತಲ್ಲೂರ, ಮುಂಡಗೋಡ
ಶ್ರೀ ರವೀಂದ್ರರಾಯ ಶ್ರೀನಿವಾಸ ಭಟ್ಟ, ಶಿರಾಲಿ
ಶ್ರೀ ವಿನಾಯಕ ಮಾಳಪ್ಪ ಮಹಾಲೆ, ಸಿದ್ದಾಪೂರ
ಶ್ರೀ ಬಿ. ಎಸ್. ಪೈ, ಕಾರವಾರ
ಶ್ರೀ ವಿಠ್ಠಲ ಜಯರಾಮ ನಾಯಕ, ಎಕ್ಕಂಬಿ



**ಜಿ.ಎಸ್.ಬಿ. ಯುವವಾಹಿನಿ**
**ನಡೆದು ಬಂದ ದಾರಿ**

**1999 ರಲ್ಲಿ ಪ್ರಥಮ ಸಮಾವೇಶ**
ಶ್ರೀರಾಮಮಂದಿರ ಹೊನ್ನಾವರ

**2000 ದಲ್ಲಿ ದ್ವಿತೀಯ ಸಮಾವೇಶ**
ಶ್ರೀ ವಿಷ್ಣುಮಠ, ಶಿರಸಿ

**2001 ರಲ್ಲಿ ತೃತೀಯ ಸಮಾವೇಶ**
ಶ್ರೀ ಲಕ್ಷ್ಮೀ ನಾರಾಯಣ ವೆಂಕಟರಮಣ ಮಠ, ಯಲ್ಲಾಪುರ

**2002 ರಲ್ಲಿ ಫೆಬ್ರುವರಿ ತಿಂಗಳು**
ಚತುರ್ಥ ಜಿ. ಎಸ್. ಬಿ. ಯುವವಾಹಿನಿ ಸಮಾವೇಶವು ದಾಂಡೇಲಿಯಲ್ಲಿ ನಡೆಯಲಿದೆ.



ಸರ್ವರಿಗೂ ಸುಸ್ವಾಗತ

## ಪ್ರಸಿದ್ಧ ಸಾರಸ್ವತರು

ಭವ್ಯ ಭಾರತದ ಪ್ರತಿಯೊಂದು ರಂಗಗಳಲ್ಲಿಯೂ ಸಾರವಂತ ಸಾರಸ್ವತ ಸಮಾಜದ ಅನೇಕರು ತಮ್ಮ ಸ್ವಂತ ಪರಿಶ್ರಮ ಮತ್ತು ಬುದ್ಧಿಮತೆಯಿಂದ ಅಪ್ರತಿಮ ಕಾರ್ಯತತ್ಪರತೆ ಹಾಗೂ ದೇಶಭಕ್ತಿಯನ್ನು ಮೆರೆದಿರುವರು. ಇಂದು ಜಗತ್ತಿನಾದ್ಯಂತ ವಿವಿಧ ಸಾರಸ್ವತರು ವೈವಿಧ್ಯಮಯ ಕಾರ್ಯಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಉತ್ತುಂಗ ಸಾಧನೆಯನ್ನು ಮಾಡಿರುವರು. ಈ ಸಾಧಕರನ್ನು ನಾವು ಗರ್ವದಿಂದ ಸ್ಮರಿಸಿ ಮಹಾನ್ ಭಾರತದೇಶದ ಶ್ರೇಯೋಭಿವೃದ್ಧಿಗಾಗಿ ಶ್ರಮಿಸೋಣ.

"ಪ್ರಸಿದ್ಧ ಸಾರಸ್ವತರು" ಈ ಲೇಖನದಲ್ಲಿ ನಮಗೆ ಲಭ್ಯವಿದ್ದ ಸಾಧಕರ ಹೆಸರುಗಳನ್ನು ಮಾತ್ರ ನೀಡಲಾಗಿದೆ. ಜಿ.ಎಸ್.ಬಿ. ಬ್ರಾಹ್ಮಣರು, ಚಿತ್ರಾಪುರ ಸಾರಸ್ವತರು, ರಾಜಾಪುರಿ ಮತ್ತು ಭಾಲವಾಲೀಕರ್ ಸಾರಸ್ವತ ಬ್ರಾಹ್ಮಣರುಗಳಲ್ಲದೆ ಇತರ ಪಂಗಡಗಳಾದ ಸಾಸಷ್ಟಿಕಾರ, ಬಾರದೇಶಕಾರ, ಪೆಡ್ನೇಕಾರ್, ಕುಡಾಲ್‌ದೇಶಕಾರ್ ಸಾರಸ್ವತ ಸಮಾಜದ ಪ್ರಸಿದ್ಧರ ಹೆಸರಗಳನ್ನು ನೀಡಲಾಗಿದೆ.

## ಬ್ಯಾಂಕಿಂಗ್ ಮತ್ತು ಸಹಕಾರಿ ಸಂಸ್ಥೆಗಳು

ಸಾರಸ್ವತ ಸಮಾಜ ಶ್ರೇಷ್ಠ ಬ್ಯಾಂಕಿಂಗ್ ಮತ್ತು ಸಹಕಾರಿ ಧುರಿಣರನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡಿದೆ. ದೇಶದ ಹಲವಾರು ರಾಷ್ಟ್ರೀಕೃತ ಬ್ಯಾಂಕುಗಳು ಸಾರಸ್ವತರಿಂದಲೇ ಸ್ಥಾಪಿತಗೊಂಡವು.

| | | |
|---|---|---|
| ★ ಡಾ॥ ಟಿ. ಎಮ್. ಎ. ಪೈ | : | ಸಿಂಡಿಕೇಟ ಬ್ಯಾಂಕಿನ ಸಂಸ್ಥಾಪಕರು |
| ★ ಅಂಮ್ಮೇಂಬಳ್ ಸುಬ್ರಾಯ ಪೈ | : | ಕೆನರಾ ಬ್ಯಾಂಕಿನ ಸಂಸ್ಥಾಪಕರು |
| ★ ಶ್ರೀ ಸುಂದರರಾಮ ಪೈ | : | ಕಾರ್ಪೋರೇಶನ್ ಬ್ಯಾಂಕಿನ ಸಂಸ್ಥಾಪಕರು/ಅಧ್ಯಕ್ಷರು |
| ★ ತಾರಿಮಕ್ಕಿ ಶ್ರೀಪಾದ ಸುಬ್ಬರಾವ್ | : | ಶಾಮರಾವ ವಿಠ್ಠಲ ಕೋ-ಆಪರೇಟಿವ್ ಬ್ಯಾಂಕಿನ ಸಂಸ್ಥಾಪಕರು |
| ★ ಶ್ರೀ ಕೆ. ಕೆ. ಪೈ | : | ಸಿಂಡಿಕೇಟ ಬ್ಯಾಂಕಿನ ಅಧ್ಯಕ್ಷರು, ಮಣಿಪಾಲ ಫೈನಾನ್ಸ ಕಾರ್ಪೋರೇಶನ್ ಅಧ್ಯಕ್ಷರು |
| ★ ಬೆನಗಲ್ ರಾಮರಾವ್ | : | ಆರ್.ಬಿ.ಐ. ಗವರ್ನರ ಅಂತರಾಷ್ಟ್ರೀಯ ಬ್ಯಾಂಕ ನಿಗಮದ ಭಾರತೀಯ ಪ್ರತಿನಿಧಿ |
| ★ ನಾಯಮಪಳ್ಳಿ ರಮಾನಂದ | : | ಸೆಂಟ್ರಲ್ ಬ್ಯಾಂಕಿನ ಅಧ್ಯಕ್ಷರು ಮತ್ತು ಬ್ಯಾಂಕಿಗ್ ಕಮೀಷನ್ ಸದಸ್ಯರು |
| ★ ಆರ್. ಎನ್. ಹಳದಿಪುರ | : | ಆರ್.ಬಿ.ಐ.ನ ಸದಸ್ಯರು |
| ★ ಎನ್. ಕೆ. ಸಿಂಕಾರ | : | ಭಾರತೀಯ ಜೀವ ವಿಮೆ ನಿಗಮದ ಅಧ್ಯಕ್ಷರು |
| ★ ಡಿ. ಎ. ಬಿಜೂರ | : | ಪಾಕಿಸ್ತಾನದ ಹಬೀಬ ಬ್ಯಾಂಕಿನ ಕಾರ್ಯದರ್ಶಿ ಮತ್ತು ಯೂನಿಯನ್ ಬ್ಯಾಂಕ ಆಫ್ ಇಂಡಿಯಾದ ಕಾರ್ಯದರ್ಶಿಗಳು |
| ★ ರಾವ ಬಹಾದೂರ ಪಿ. ಪಂಡಿತ | : | ಕೆ.ಡಿ.ಸಿ.ಸಿ ಬ್ಯಾಂಕಿನ ಸಂಸ್ಥಾಪಕರು |
| ★ ಎಸ್. ಎನ್. ಕೇಶವೈನ | : | ಶಿರ್ಶಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕಿನ ಸಂಸ್ಥಾಪಕರು |
| ★ ಟಿ. ರಮೇಶ ಪೈ | : | ಮಹಾರಾಷ್ಟ್ರ ಅಫೇಕ್ಸ ಕಾರ್ಪೋರೇಶನ್ ಅಧ್ಯಕ್ಷರು |
| ★ ಪಿ. ಎಸ್. ಶೆಣೈ | : | ಯೂನಿಯನ್ ಬ್ಯಾಂಕ್ ಆಫ್ ಬರೋಡಾದ ಅಧ್ಯಕ್ಷರು |
| ★ ಕೆ. ವಿ. ಕಾಮತ | : | ಐ.ಸಿ.ಐ.ಸಿ.ಐ. ಬ್ಯಾಂಕಿನ ಅಧ್ಯಕ್ಷರು |
| ★ ಪಿ. ಜಿ. ನಾಯಕ | : | ಯೂ.ಟಿ.ಐ. ಬ್ಯಾಂಕಿನ ಅಧ್ಯಕ್ಷರು |
| ★ ಡಿ. ಟಿ. ಪೈ | : | ಸಿಂಡಿಕೇಟ ಬ್ಯಾಂಕಿನ ಅಧ್ಯಕ್ಷರು |

- ★ ಆರ್. ಕೆ. ಘೋಟ್ಗಾಳಕರ : ಗ್ರೀನ್‌ಲೆಡ್ಸ ಬ್ಯಾಂಕ ಇದರ ಭಾರತದ ಮುಖ್ಯಸ್ಥರಾಗಿದ್ದರು.
- ★ ವೆಂಕಟರಾವ ನಿಲೇಕಣಿ : ತೋಟಗಾರ ಸೊಸೈಟಿ ಸಂಸ್ಥಾಪಕ ಅಧ್ಯಕ್ಷರು
- ★ ವಿ. ಎಸ್. ಸೊಂದೆ : ಶಿರ್ಶಿ ಅರ್ಬನ್ ಬ್ಯಾಂಕ ಅಧ್ಯಕ್ಷರು, ರಾಜ್ಯ ಪ್ರಶಸ್ತಿ ವಿಜೇತರು
- ★ ಪುಂಡಲೀಕರಾವ ಪಂಡಿತ : ತೋಟಗಾರ್ರ ಸೊಸೈಟಿ ದ್ವಿತೀಯ ಅಧ್ಯಕ್ಷರು
- ★ ಎಸ್. ಆರ್. ರಂಗಮೂರ್ತಿ : ಕೇರಳ-ಕರ್ನಾಟಕದ ಪ್ರಸಿದ್ಧ ಸಹಕಾರಿ ಸಂಸ್ಥೆ ಕ್ಯಾಂಪ್ಕೋದ ಅಧ್ಯಕ್ಷರು

## ಸಂಗೀತ ನಾಟ್ಯ ಕಲೆ

- ★ ಬಿಡಾರಂ ಕೃಷ್ಣಪ್ಪನವರು : ಮೈಸೂರ ಮಹಾರಾಜರ ಆಸ್ಥಾನದಲ್ಲಿ ವಿದ್ವಾಂಸರು
- ★ ಪಂಡಿತ ದಿನಕರ ಕಾಯ್ಕಣಿ : ಸಂಗೀತಗಾರರೂ, ಭಾರತೀಯ ವಿದ್ಯಾಪೀಠದ ನಿರ್ದೇಶಕರು
- ★ ಮಂಜೇಶ್ವರ ಕೌಶಲ್ಯ : ಪ್ರಸಿದ್ಧ ಹಿಂದೂಸ್ತಾನಿ ಸಂಗೀತ ಗಾಯಕಿ
- ★ ಮೋಹನ ನಾಡಕರ್ಣಿ : ಕರ್ನಾಟಕ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತರು
- ★ ಪಂಡಿತ ಚಿದಾನಂದ ನಾಗೇಕರ : ಪ್ರಸಿದ್ಧ ಗಾಯಕರು
- ★ ಸುಂದರ ರಾಮರಾವ್ ಹತ್ತಂಗಡಿ : ಹಿಂದೂಸ್ತಾನಿ ಸಂಗೀತ ಗಾಯಕರು
- ★ ಲಲಿತಾ ಜೆ. ರಾವ್ : ಸಂಗೀಗಾರರು
- ★ ಪಂಡಿತ ಚಂದ್ರಶೇಖರ ರಾ. ಭಟ್ಟ : ಸಂಗೀತಗಾರರು
- ★ ಎಸ್. ಕೃಷ್ಣಾರಾವ : ಅಧ್ಯಕ್ಷರು, ಕರ್ನಾಟಕ ನೃತ್ಯಕಲಾ ಪರಿಷತ್ತ
- ★ ಚಂದ್ರ ಭಾಗಾದೇವಿ : ಅಧ್ಯಕ್ಷೆ, ಕರ್ನಾಟಕ ಸಂಗೀತ ನಾಟಕ ಅಕಾಡೆಮಿ
- ★ ಪುತ್ತೂರು ನರಸಿಂಹ ನಾಯಕ : ಶ್ರೇಷ್ಟ ಸಂಗೀತಗಾರರು, ಗಾಯಕರು
- ★ ಜಿತೇಂದ್ರ, ಅಭಿಷೇಕ. ಅಜಿತ ಕಡಕಡೆ, ರಾಮದಾಸ ಕಾಮತ, ಮೋಹನ ಚಕ್ರಮನೆ, ಲಲಿತಾ ಉಭಯಕರ, ಉಪೇಂದ್ರ ಭಟ್ಟ : ಇವರೆಲ್ಲ ಪ್ರಸಿದ್ಧ ಸಂಗೀತಗಾರರು
- ★ ಅಂಮ್ಮೆಂಬಳ ದಿನಕರ : ಪ್ರಸಿದ್ಧ ಸಂಗೀತ ಸಂಯೋಜಕರು, ಆಕಾಶವಾಣಿಯಲ್ಲಿ ಕಾರ್ಯಕ್ರಮ ಪ್ರಸಾರದ ಮುಂಚಿನ ಸಂಗೀತವನ್ನು ಇವರೇ ಸಂಯೋಜಿಸಿದ್ದಾರೆ.
- ★ ಭಾಸ್ಕರ ಚಂದಾವರ : ಅಂತರಾಷ್ಟ್ರೀಯ ಮಟ್ಟದ ಸಿತಾರವಾದಕರು, ಭಾರತದ ಚಲನಚಿತ್ರ, ಟಿ.ವಿ. ಸಂಸ್ಥೆಗಳ ಪ್ರಮುಖ ಅಧಿಕಾರಿಗಳು.
- ★ ರತ್ನಾಕರ ಭಟ್ಟ ಗುಲ್ಮಾಡಿ : ಪ್ರಸಿದ್ಧ ಸಂಗೀತ ನಿರ್ದೇಶಕರು ಮತ್ತು ಅಧ್ಯಕ್ಷರು
- ★ ಪಂಡಿತ ಓಂಕಾರನಾಥ ಗುಲ್ಮಾಡಿ : ಭಾರತದ ಪ್ರಥಮ ಶ್ರೇಣಿ ತಬಲಾವಾದಕರು ಎಲ್ಲ ಪ್ರಸಿದ್ಧ ಗಾಯಕರಿಗೆ ತಬಲಾಸಾಥಿ ನೀಡಿದ್ದಾರೆ.
- ★ ನಿತ್ಯಾನಂದ ಹಳದಿಪುರ : ಪ್ರಸಿದ್ಧ ಕೊಳಲು ವಾದಕರು
- ★ ಹರಿಹರರಾವ ಹತ್ತಂಗಡಿ : ಪ್ರಸಿದ್ಧ ಸಿತಾರ ವಾದಕರು
- ★ ಪಂಡಿತ ವೆಂಕಟ ಸುಬ್ಬರಾವ್ : ಪ್ರಸಿದ್ಧ ಕೊಳಲು ವಾದಕರು
- ★ ಗೌರಂಗ ಕೋಡಿಕಾಲ : ಪ್ರಸಿದ್ಧ ತಬಲಾ ವಾದಕರು
- ★ ದೇವೇಂದ್ರ ಮುರಡೇಶ್ವರ : ಕೇಂದ್ರ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತ ಕೊಳಲು ವಾದಕರು
- ★ ಪಂಡಿತ ಸದಾನಂದ ನಾಯಪಳ್ಳಿ : ತಬಲಾ ವಾದಕರು
- ★ ಪಡುಕೋಣೆ ರಮಾನಂದ ಭಟ್ಟ : ಖ್ಯಾತ ನಾಟಕಕಾರರು
- ★ ಕೀರ್ತನ ಕೇಸರಿ ಕೇಶವ ದಾಸ್‌ಜಿ ಮತ್ತು ಅಚ್ಯುತ ದಾಸರು : ಸುಪ್ರಸಿದ್ಧ ಕೀರ್ತನಕಾರರು, ಧರ್ಮ ಪ್ರಸಾರಕರು

★ ಶ್ರೀಮತಿ ಮಾಯಾ ರಾವ್ : ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ವಿಜೇತ ಅಂತರಾಷ್ಟ್ರೀಯ ಪ್ರಸಿದ್ಧ ಕಥಕ ನಾಟ್ಯ ಕಲಾವಿದೆ.

★ ರಾಜಾರಾಮರಾವ ಉಡುಪಿ : ಲಲಿತ ಕಲಾ ಅಕಾಡೆಮಿ ಪ್ರಶಸ್ತಿ ಪಡೆದ ಕಲಾವಿದರು

★ ವರಶಿಲ್ಪಿ ಗಂಜಾಳ ಗೋಪಾಲ ಶೆಣೈ : ಪ್ರಸಿದ್ಧ ಶಿಲ್ಪಕಾರರು (ಕಾರ್ಕಳ)

★ ಸುಮನ್ ಕಲ್ಯಾಣಪುರ, ಶ್ರೀಮತಿ ಕೃಷ್ಣಾಕಲ್ಲೆ, ಅನುರಾಧಾ ಪೋಡವಾಲ, ಅನುರಾಧಾ ಧಾರೇಶ್ವರ : ಪ್ರಸಿದ್ಧ ಗಾಯಕರು

★ ಗುಲ್ವಾಡಿ ಶಿವಾನಂದ ಭಟ್ಪಜಿ : ಪ್ರಸಿದ್ಧ ಹರಿದಾಸರು

★ ನಾರಾಯಣ ಭಟ್ಪಜಿ : ಪ್ರಸಿದ್ಧ ಹರಿದಾಸರು

★ ಶ್ರೀ ವಾಸುದೇವ ಟಿ. ಕಾಮತ : ಎಮ್. ಎಸ್. ಗೋಳ್ವಲ್ಕರ ಪ್ರಶಸ್ತಿ ವಿಜೇತ ಅಂತರಾಷ್ಟ್ರೀಯ ಚಿತ್ರ ಕಲಾವಿದರು.

★ ತಾಲಮಕ್ಕಿ ಮುಕುಂದರಾವ್ : ಪ್ರಸಿದ್ಧ ವ್ಯಂಗ ಚಿತ್ರಗಾರರು, ಏರ್ ಇಂಡಿಯಾ ಮಹಾರಾಜರ ಚಿತ್ರದ ಸೃಷ್ಟಿಕರ್ತರು.

★ ಉಪ್ಪಿನಕೊದ್ರು, ಕೊಗ್ಗಾ ಕಾಮತ್ : ತೊಗಲು ಗೊಂಬೆಯಾಟದ ಪ್ರಸಿದ್ಧ ಹಸ್ತಿ

★ ಶೇಷಗಿರಿ ಕಿಣಿ, ಗೋಪಾಲ ಕೃಷ್ಣ ಕಾಮತ, ಗಣಪತಿ ಪ್ರಭು, ಕೆ. ವಿ. ಪೈ : ಯಕ್ಷಗಾನ ಮತ್ತು ವೇಷಗಾರಿಕೆ ಭಾಗವತಿಕೆ ಪ್ರಸಿದ್ಧರು.

★ ಎನ್. ಡಿ. ಶ್ಯಾನಭಾಗ (ಪುತ್ರಣ್ಣ ಶಿರ್ಶಿ) : ಸುಪ್ರಸಿದ್ಧ ಮೇಕಪ್ ಕಲಾವಿದ, ನಾಟಕಕಾರ

## ರಾಜಕೀಯ, ಆಡಳಿತ, ಶಿಕ್ಷಣ ಮತ್ತು ಸಮಾಜ ಸುಧಾರಕರು

★ ನಾರಾಯಣ ಗಣೇಶ ಚಂದಾವರಕರ : 1900ರ ಲಾಹೋರ ಅಂತರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರು, ಶಾಸಕರು ಬಾಂಬೆ ಯುನಿರ್ವಸಿಟಿಯ ಉಪಕುಲಪತಿಗಳು

★ ವಿಠ್ಠಲ ಎನ್ ಚಂದಾವರಕರ : ಬಾಂಬೆ ಮೇಯರ್, ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರು, ಶಾಸಕರು, ಬಾಂಬೆ ವಿಶ್ವವಿದ್ಯಾಲಯದ ಉಪಕುಲಪತಿಗಳು

★ ಕಮಲಾದೇವಿ ಚಿಟ್ಟೋಪಾಧ್ಯಾಯ : ಸ್ವತಂತ್ರ ಸಂಗ್ರಾಮದಲ್ಲಿ ಜೈಲಿಗೆ ಹೋದ ಪ್ರಥಮ ಮಹಿಳೆ, ಪದ್ಮ ವಿಭೂಷಣ, ಮೆಗ್ಸೆಸಿಸ್ ಮತ್ತು ಯುನೆಸ್ಕೊ ಪ್ರಶಸ್ತಿ ವಿಜೇತ ಸಮಾಜ ಸುಧಾರಕರು

★ ಬಿಜೂರ ತಾರಾಬಾಯಿ : ಭಾರತ ಸರ್ಕಾರದ ಮಕ್ಕಳ ಕಲ್ಯಾಣ ಸಮೀತಿಗೆ ಅಧ್ಯಕ್ಷೆಯಾಗಿದ್ದರು. ಮಹಿಳೆಯರ ಅಭಿವೃದ್ಧಿಗಾಗಿ ಪ್ರಪ್ರಥಮ ಪೋಲಿಟೆಕ್ನಿಕ್ ಸ್ಥಾಪಿಸಿ ಕೇಂದ್ರ ಸರ್ಕಾರದ ಹಲವಾರು ಸಮೀತಿಗೆ ಅಧ್ಯಕ್ಷೆಯಾಗಿದ್ದರು

★ ಎಸ್. ಆರ್. ಡೊಂಗರ್‌ಕೇರಿ : ಔರಂಗಾಬಾದ ವಿಶ್ವವಿದ್ಯಾಲಯದ ಉಪ ಕುಲಪತಿ

★ ಶ್ರೀಮತಿ ಕಮಲಾ ಡೊಂಗರ್‌ಕೇರಿ : ಮಹಾರಾಷ್ಟ್ರದ ಮಹಿಳಾಸಭಾ ಅಧ್ಯಕ್ಷೆ

★ ರಾಮದಾಸ ಎನ್. ಹಳದಿಪುರ : ಅರುಣಾಚಲ ಪ್ರದೇಶದ ರಾಜ್ಯಪಾಲರಾಗಿದ್ದರು

★ ಶಂಕರರಾವ ಗುಲ್ವಾಡಿ : ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರು

★ ವೆಂಕಟರಾವ ಗುಲ್ವಾಡಿ : ಪೋಲಿಸ ಅಧಿಕಾರಿ ಮತ್ತು ಪ್ರಸಿದ್ಧ ಸಮಾಜ ಸುಧಾರಕರು

★ ಅಮ್ಮೆಂಬಳ್ ಸುಂದರರಾವ : ಈಸ್ಟ ಇಂಡಿಯಾ ಹತ್ತಿ ನಿಗಮಕ್ಕೆ ಅಧ್ಯಕ್ಷರಾಗಿ ಮತ್ತು ಭಾರತೀಯ ವಾಯುಸೇನೆಯ ನ್ಯಾಯಾಂಗ ವಿಭಾಗದಲ್ಲಿ ಸೇವೆ ಸಲ್ಲಿಸಿದ್ದಾರೆ.

| | | |
|---|---|---|
| ★ ಬೆನಗಲ್ ನರಸಿಂಹರಾವ | : | ಹೈಕೋರ್ಟ ನ್ಯಾಯಾಧೀಶರು ಅಂತರಾಷ್ಟ್ರೀಯ ಅಣು ವಿದ್ಯುತ್ ಉಪಸಮಿತಿಗೆ ಅಧ್ಯಕ್ಷರಾಗಿರುವರು ಮತ್ತು ಸಂಯುಕ್ತ ಸಂಸ್ಥಾನದ ಪ್ರತಿನಿಧಿಗಳು |
| ★ ಬೆನಗಲ್ ರಾಮರಾವ್ | : | ಇಂಗ್ಲೆಂಡಿನಲ್ಲಿ ಭಾರತದ ಹೈ ಕಮೀಷನ್, ಅಮೇರಿಕಾದ ರಾಯಭಾರಿ ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಗೆ ಭಾರತೀಯ ಪ್ರತಿನಿಧಿ ಭಾರತೀಯ ರಿಜರ್ವ ಬ್ಯಾಂಕ ಗವರ್ನರ್ |
| ★ ಬೆನಗಲ್ ಶಿವಾರಾವ್ | : | ಸಂಸದರು, ಫ್ರಾನ್ಸಿನಲ್ಲಿ ನಡೆದ ಸಂಯುಕ್ತ ರಾಷ್ಟ್ರಸಭೆ ಅಧ್ಯಕ್ಷರು |
| ★ ಪ್ರೊಫೆಸರ ಕೃಷ್ಣಾ ಭಾರದ್ವಾಜ | : | ಜವಾಹರಲಾಲ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ಅಧ್ಯಯನ ಕೇಂದ್ರದ ಸಂಸ್ಥಾಪಕ ಅಧ್ಯಕ್ಷೆ. |
| ★ ವೊಂಬಟಕೆರೆ ಪಾಂಡುರಂಗರಾವ | : | ಕ್ಯಾಂಬ್ರಿಜ್ಜ ಯುನಿವರ್ಸಿಟಿಯಲ್ಲಿ ಇಂಗ್ಲೀಷಿನಲ್ಲಿ ಪ್ರಥಮ ರೇಂಕ್ರ, ರಿಟಾಯರ್ಡ ಜಡ್ಜ |
| ★ ಶಂಕರರಾವ ಹತ್ತಂಗಡಿ | : | ಭಾರತದ ಕಂಟ್ರೋಲರ್ ಆಫ್ ಕರೆನ್ಸಿ ಆಗಿದ್ದರು |
| ★ ವಿ. ಎಸ್. ಹೆಜಮಾಡಿ | : | ಯೂನಿಯನ್ ಪಬ್ಲಿಕ ಸರ್ವಿಸ ಕಮಿಷನ್ ಅಧ್ಯಕ್ಷರಾಗಿದ್ದರು |
| ★ ರಾಮರಾವ ವಿಠ್ಠಲ ಕಾಯ್ಕಿಣಿ | : | ಬಾಂಬೆ ವಿಶ್ವವಿದ್ಯಾಲಯದ ಗಾಯನ ಸಭಾದ ಸಂಸ್ಥಾಪಕ ಅಧ್ಯಕ್ಷರು |
| ★ ಎಸ್. ಆರ್. ಕಂತೇಬೆಟ್ಟು | : | ಓವರ್ಸಿಸ್ ಕಮಿನ್ಯುಕೇಷನ್ ಸರ್ವಿಸ್ ಆಫ್ ಇಂಡಿಯಾ ಇದರ ಪ್ರಥಮ ನಿರ್ದೇಶಕರು |
| ★ ಕಾರ್ನಾಡ ಸದಾಶಿವರಾವ | : | ಮಹಾತ್ಮಾ ಗಾಂಧೀಜಿಯ ಅತ್ಯಂತ ಸಮೀಪವರ್ತಿಗಳು, ದೇಶಭಕ್ತರು |
| ★ ಸುಮಿತ್ರಾ ಮಂಗೇಶ ಕತ್ರೆ | : | ಪೀಲೋಲಾಜಿಸ್ಟ, ರಾಯಲ್ ಎಸಿಯಾಟಿಕ್ ಸೊಸೈಟಿ ಅಮೇರಿಕಾ ಇದರ ಸದಸ್ಯರು |
| ★ ಮೀರಾ ಕೊಪ್ಪಿಕರ ಮತ್ತು ಕಟುಮಲ್ ರಂಗಾರಾವ | : | ಪ್ರಸಿದ್ಧ ಸಮಾಜ ಸೇವಕರು |
| ★ ಉಮಾಬಾಯಿ ಕುಂದಾಪುರ | : | ಪ್ರಸಿದ್ಧ ಸಮಾಜ ಸೇವಕರು |
| ★ ಶಂಕರನಾರಾಯಣ ಕುಂದಾಪುರ | : | ಹೈಕೋರ್ಟ ಜಡ್ಜು |
| ★ ಡಾ॥ ಸುನೀಲಾ ಮಾವಿನಕುರ್ವೆ | : | ಗೋವಾ ವಿಶ್ವವಿದ್ಯಾಲಯದ ಉಪಕುಲಪತಿಗಳು |
| ★ ಮಂಗೇಶ ವಿ ನಾಡಕರ್ಣಿ | : | ಗುಲ್ಬರ್ಗಾ ವಿಶ್ವವಿದ್ಯಾಲಯದ ಉಪಕುಲಪತಿಗಳು |
| ★ ಪಂಡಿತ ಗಜಾನನ ರಾವ | : | ಶಾಸಕರು |
| ★ ಸುಮತಿ ಬಾಲಚಂದ್ರ ಮಡಿಮನೆ | : | ಶಾಸಕರು, ಸಭಾಪತಿಗಳು |
| ★ ವಿಶ್ವನಾಥರಾವ್ ಗೊಲ್ಲರಕೇರಿ | : | ಯುನಸ್ಕೊದ ಹಿರಿಯ ಸಲಹೆಗಾರರು |
| ★ ಸುರೇಶ ಪ್ರಭು | : | ಕೇಂದ್ರಸರಕಾರದ ಮಂತ್ರಿಗಳು |
| ★ ರಘುನಾಥ ವಿ ದೇಶಪಾಂಡೆ | : | ರಾಜ್ಯ ಸರಕಾರದ ಮಂತ್ರಿಗಳು |
| ★ ಗುರುದಾಸ ಕಾಮತ | : | ಮಹಾರಾಷ್ಟ್ರದ ಸಂಸದರು |
| ★ ಮನೋಹರ ಪಾರಿಕರ | : | ಗೋವಾ ರಾಜ್ಯದ ಮುಖ್ಯಮಂತ್ರಿಗಳು |
| ★ ಶಶಿಕಲಾ ಕಾಕೋಡಕರ | : | ಗೋವಾ ರಾಜ್ಯದ ಮಂತ್ರಿಗಳು |
| ★ ವಿನಯ ಚಂದ್ರ ಕ್ಯೊಗೊಂಡಿ | : | ಶಾಸಕರು |
| ★ ಎಸ್. ವಿ. ಪಿಕಳೆ | : | ಸುಪ್ರಿಂಕೋರ್ಟಿನ ಪ್ರಖ್ಯಾತ ನ್ಯಾಯವಾದಿ |
| ★ ಹುಂಡಿ ವಿಷ್ಣು ಕಾಮತ | : | ಸಮಾಜವಾದಿ, ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರು |

★ ನಾಥ ಪೈ, ಶ್ರೀನಿವಾಸ ಮಲ್ಯಾ, ಬಂಟ್ವಾಳ ನಾರಾಯಣ ನಾಯಕ, ರಂಗನಾಥ ಶೆಣೈ, ಟಿ. ಎಮ್. ಪೈ ವೈಕುಂಠ ಬಾಳಿಗಾ, ಯು. ಎಸ್. ಕಾಮತ, ಯೋಗೇಶ ಭಟ್ಟ, ಶ್ರೀರಂಗ ಕಾಮತ್, ತಿಮ್ಮಪ್ಪ ನಾಯಕ, ಬಿಳಿಗೆಯ ಮಂಡಗಾಂಕರ ಕುಟುಂಬದ ಸದಸ್ಯರು, ವಸಂತ ಸುಬ್ರಾಯ ಜೋಶಿ, ದಿಗಂಬರ ಕಾಮತ ಇವರೆಲ್ಲ ಶ್ರೇಷ್ಠ ರಾಜಕೀಯ ಪಟುಗಳು, ಶಾಸಕರು, ಸ್ವಾತಂತ್ರ್ಯ ಹೋರಾಟಗಾರರು.

★ ಎಂ. ವಿ. ಶೆಣೈ : ಸುಪ್ರಿಂ ಕೋರ್ಟಿನ ಪ್ರಖ್ಯಾತ ನ್ಯಾಯವಾದಿ

★ ಸೂರ್ಯನಾಥ ಕಾಮತ : ಸುಪ್ರಸಿದ್ಧ ಇತಿಹಾಸಕಾರರು, ರಾಜ್ಯೋತ್ಸವ ಪ್ರಶಸ್ತಿ ವಿಜೇತರು

★ ಡಾ॥ ಎಚ್. ಎಸ್. ಕಾಮತ : ಕೇಂದ್ರ ಅಣುಶಕ್ತಿ ಆಯೋಗದಲ್ಲಿ ಭಾರಜಲ ವಿಭಾಗದ ಅಧ್ಯಕ್ಷ

★ ಕೆ. ವಿ. ಪೈ : ಕರ್ನಾಟಕ ವಲಯದ ಪ್ರಥಮ ಪೋಸ್ಟ ಮಾಸ್ಟರ್ ಜನರಲ್

★ ಸ್ವಾಮಿ ಈಶ್ವರನಂದಜಿ ಮತ್ತು ಕಾಡಂ ಕಾಲೇಲಕರ್ : ಪ್ರಸಿದ್ಧ ಸಮಾಜ ಸೇವಕರು

★ ಡಾ॥ ರಾಮ ಹೆಗಡೆ, ಹನುಮಂತರಾವ್ ಮಾಂಜ್ರೇಕರ, ಎಸ್. ಕೆ. ಪೈ ಪಿ. ಎಸ್. ಕಾಮತ ಮುಂತಾದವರು ದೇಶಕ್ಕಾಗಿ ಸೇವೆ ಸಲ್ಲಿಸಿದವರು.

★ ಎಮ್. ಡಬ್ಲ್ಯು. ದೇಸಾಯಿ : ಬಾಂಬೇ ಮುನಸಿಪಲ್ ಕಮೀಷನರ್

★ ಸುಮಂತ ಮುಳಗಾಂವಕರ : ಟೆಲ್ಕೋ (ಟಾಟಾ) ಚೇರಮನ್

★ ಬಾಲಕೃಷ್ಣ ಎಸ್. ಸೊಂದೆ : ಗೋವಾ ವಿಶ್ವವಿದ್ಯಾಲಯದ ಉಪಕುಲಪತಿಗಳು

★ ಅರುಣ ಜೆಟ್ಲಿ : ಕೇಂದ್ರ ಸರ್ಕಾರದ ಮಂತ್ರಿಗಳು, (ಸಿಂಧನಿಂದ ವಲಸೆ ಬಂದ ಸಾರಸ್ವತ ಬ್ರಾಹ್ಮಣರು)

★ ಕಾಶೀನಾಥ ಮಹಾಲೆ : ಆಸ್ಸಾಂ ವಿಶ್ವವಿದ್ಯಾಲಯದ ಉಪಕುಲಪತಿಗಳು

★ ಉಗ್ರಾಣ ಸುಂದರರಾವ್ : ಪ್ರಸಿದ್ಧ ಇತಿಹಾಸಕಾರರು

★ ನಾಲ್ಕೂರ ಶ್ರೀಪಾದರಾವ್ : ಪೆಸ್ಟ ಕಂಟ್ರೋಲ್ ಇಂಡಿಯಾದ ಸಂಸ್ಥಾಪಕರು

★ ಡಿ. ಆರ್. ಮಂಕಿಕರ್ : ಆಲ್ ಇಂಡಿಯಾ ನ್ಯೂಸಪೇಪರ ಅಧ್ಯಕ್ಷರು, ಆಲ್ ಇಂಡಿಯಾ ಪ್ರೆಸ್ ಕ್ಲಬ್ ಅಧ್ಯಕ್ಷರು

★ ಬಿ. ವೈ. ಕುಂಠರಾವ ಬಾಳಿಗಾ : ಸಭಾಪತಿ, ಮೈಸೂರ ಸ್ಟೇಟ ಅಸೆಂಬ್ಲಿ

★ ಟಿ. ರಮೇಶ ಯು. ಪೈ : ನಿರ್ದೇಶಕರು, ಅಂತರಾಷ್ಟ್ರೀಯ ರೋಟರಿ ಸಂಸ್ಥೆ

★ ಟಿ. ಎ. ಪೈ : ಎಲ್.ಐ.ಸಿ. ಚೇರಮನ್

★ ಡಾ॥ ದಯಾನಂದ ಶ್ಯಾನಭಾಗ : ರಾಷ್ಟ್ರಪ್ರಶಸ್ತಿ ವಿಜೇತ ದೇಶದ ಕೆಲವೇ ಸಂಸ್ಕೃತ ಸಂಶೋಧಕರಲ್ಲಿ ಒಬ್ಬರು

★ ಡಾ॥ ಸಾವುರು ಶಂಕರರಾವ : ಕೇಂದ್ರ ಸಾರ್ವಜನಿಕ ನಿರ್ದೇಶನಾಲಯದ ಭಾರತದ ಪ್ರಥಮ ನಿರ್ದೇಶಕರು

★ ನೈಪುಳ್ಳಿ ಪ್ರೊ॥ ಸೋಮಶೇಖರ : ಅಂತರಾಷ್ಟ್ರೀಯ ಖ್ಯಾತಿಯ ಗಣಿತ ಸಂಶೋಧಕ

★ ಕಾಟಿ ಸುರೇಶ ಲಕ್ಷಣ : ನ್ಯೂಕ್ಲಿಯರ್ ಪವರ ಬೋರ್ಡಿನ ಅಧ್ಯಕ್ಷರು

★ ಡಾ॥ ಕೃಷ್ಣಾ ಎಮ್. ಇಸಳೂರ : 1999-2000 ವರ್ಷದ ಲಾಲಬಹಾದ್ದೂರ ಶಾಸ್ತ್ರಿ ಯುವ ವಿಜ್ಞಾನಿ ಪ್ರಶಸ್ತಿ ಪಡೆದವರು

★ ಕೊಡಿಯಾಳ ಶಂಕರರಾವ : ರಾಷ್ಟ್ರೀಯ ಪ್ರಶಸ್ತಿ ವಿಜೇತ ಅತ್ಯುತ್ತಮ ಶಿಕ್ಷಕ

★ ಬೆನಗಲ ಸಂಜೀವರಾವ : ಹೆಸರಾಂತ ಶಿಕ್ಷಣ ತಜ್ಞರು

★ ರಾಮದಾಸ ಎಮ್ ಕಾಮತ ಅಂಕೋಲಾ : ಕೋಟಿ ರೂಪಾಯಿ ವೆಚ್ಚದ ಗುರುಕುಲ ಮಾದರಿಯ ಉಚಿತ ಶಿಕ್ಷಣ ಪದ್ಧತಿಯ ಸಂಸ್ಥಾಪಕರು

★ ಡಾ॥ ಪಿ. ಎಮ್. ಕಾಮತ : ಕೆನರಾ ಕಾಲೇಜ ಕುಮಟಾದಲ್ಲಿ ಎಮ್.ಬಿ.ಎ. ವ್ಯಾಸಂಗಕ್ಕೆ 25 ಲಕ್ಷ ಸಹಾಯ ನೀಡಿದ ದಾನಿಗಳು
★ ವಿದ್ಯಾನಂದ ಶೆಣೈ : ರಾಷ್ಟ್ರೋತ್ಥಾನ ಬಳಗ ಬೆಂಗಳೂರು ಇದರ ಪ್ರಧಾನ ಸಂಚಾಲಕರು
★ ಕೆ. ವಿ. ಎಮ್. ಪೈ : ಚೀಫ ಕಮೀಷನರ್, ಇನ್‌ಕಮ್ ಟ್ಯಾಕ್ಸ, ಮುಂಬಯಿ
★ ಬಿ. ದಾಮೋಧರ ಪ್ರಭು : ಕೊಂಕಣಿ ಭಾಷೆಯ ಚಳುವಳಿಗಾರ
★ ಬಸ್ತಿ ವಾಮನ ಶೆಣೈ : ಸಂಚಾಲಕರು ವಿಶ್ವ ಕೊಂಕಣಿ ಮತ್ತು ವಿಶ್ವ ಸಾರಸ್ವತ ಸಮ್ಮೇಳನ
★ ಬಿ. ಆರ್. ರಾವ್ : ಯೋಜನಾಧಿಕಾರಿ (ಸಿಬರ್ಡ ನೌಕಾ ನೆಲೆ, ಕಾರವಾರ)

ಸರಸ್ವತಿ ಪುತ್ರರೆ ಎಂದೆನಿಸಿಕೊಂಡಿರುವ ಸಾರಸ್ವತರು, ತಾವು ನೆಲೆಸಿದ ನಗರ, ಪಟ್ಟಣ ಮತ್ತು ಗ್ರಾಮಗಳಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು ಅಥವಾ ಅನ್ಯ ಸಮಾಜದವರ ಸಹಕಾರದಿಂದ ಪ್ರಾರಂಭಿಸಿದರು. ಜಗತ್‌ಪ್ರಸಿದ್ಧ ಮಣಿಪಾಲ ಶಿಕ್ಷಣ ಸಂಸ್ಥೆಗಳು, ಮಂಗಳೂರಿನ ಗಣಪತಿ ಹೈಸ್ಕೂಲ, ಉಡುಪಿಯ ಶಿಕ್ಷಣ ಸಂಸ್ಥೆಗಳು, ಕುಂದಾಪುರದ ಬಂಢಾರಕರ ಕಾಲೇಜು, ಹೊನ್ನಾವರದ ನ್ಯೂ ಇಂಗ್ಲೀಷ ಸ್ಕೂಲ, ಕಾರವಾರದ ಹಿಂದೂ ಸ್ಕೂಲ, ಅಂಕೋಲಾದ ಗೋಖಲೆ ಸಂಟನರೀ, ದಿನಕರ ದೇಸಾಯಿ ಶಿಕ್ಷಣ ಸಂಸ್ಥೆಗಳು, ಕುಮಟಾದ ಎ. ವಿ. ಬಾಳಿಗಾ, ಗಿಬ್ಸ ಮತ್ತು ಕೆನರಾ ಶಿಕ್ಷಣ ಸಂಸ್ಥೆಗಳು ಶಿರಸಿಯ ಮಾಡರ್ನ ಎಜ್ಯುಕೇಷನ್ ಹೀಗೆ ಇನ್ನೂ ಅನೇಕ ಶಿಕ್ಷಣ ಸಂಸ್ಥೆಗಳು ಸಾರಸ್ವತರಿಂದ ನಡೆಸಲ್ಪಟ್ಟು, ಸಮಾಜದಲ್ಲಿ ಶಿಕ್ಷಣ ಕ್ರಾಂತಿ ತರಲು ಕಾರಣೀಭೂತವಾಗಿವೆ. ಪ್ರಸಿದ್ಧ ಶಿಕ್ಷಣ ಪ್ರಸಾರಕರಾದ ವಿ.ಎಸ್.ಕುಡ್ವಾ, ಮೂಳೆಹಳ್ಳಿ ಶಿವರಾಮ, ಕೇಶವಾಯ್ನು, ಡಾ॥ ಟಿ. ಎಮ್. ಎ. ಪೈ, ಟಿ. ಎ. ಪೈ, ದಿನಕರ ದೇಸಾಯಿ, ವಿಠ್ಠಲಮಲ್ಯ, ಎ. ವಿ. ಬಾಳಿಗಾ, ಶಿರೂರ ಸಹೋದರರು, ಪುಂಡಲೀಕ ಶೆಣೈ, ನ್ಯಾಯವಾದಿ ಎಸ್. ಪಿ. ಕಾಮತ್, ಕಾರವಾರ, ವಿ. ಎಸ್. ಸೋಂದೆ, ಶಿರಸಿ, ಯಲ್ಲಾಪೂರದ ಬಾಬುರಾವ ಬಿ. ಭಟ್ಟ, ವಿಷ್ಣು ಬಾಳೇರಿ ಹೊನ್ನಾವರ ಎಲ್ಲರೂ ಸುತ್ಯಾರ್ಹರು.

## ಕ್ರೀಡೆ

★ ಪ್ರಕಾಶ ಪಡಕೋಣೆ : ವಿಶ್ವವಿಖ್ಯಾತ ಬ್ಯಾಡಮಿಂಟನ್ ಆಟಗಾರ
★ ಸುನೀಲ ಗವಾಸ್ಕರ, ವೆಂಗಸಾರ್‌ಕಾರ್, ದಿಲೀಪ ಸರದೇಸಾಯಿ, ಬಾಪು ನಾಡಕರ್ಣಿ, ಸಚಿನ ತೆಂಡಲ್ಕೂರ : ವಿಶ್ವ ವಿಖ್ಯಾತ ಕ್ರಿಕೆಟ ಆಟಗಾರರು
★ ತಾರಾನಾಥ ಶೆಣೈ : ಇಂಗ್ಲಿಷ ಕಡಲ್ಗಾಗೆ ಈಜಿ ದಾಟಿದವರು
★ ಬಂಟ್ವಾಳ ಪ್ರಭಾಕರ ರಾವ್ : ರಾಷ್ಟ್ರೀಯ ಭಾರ ಎತ್ತುವಿಕೆಯಲ್ಲಿ ಚಿನ್ನದ ಪದಕ ಗಳಿಸಿದವರು.
★ ಎಲ್ಲೂರು ಉಮೇಶ ರಾವ್ : ಕರ್ನಾಟಕ ಎಮೆಚೂರ ಅಥ್ಲೆಟಿಕ್ಸ್ ಅಸೋಷಿಯೇಷನ್ ಅಧ್ಯಕ್ಷರು
★ ಮಂಗಲಾ ಶಾನಭಾಗ : ರಾಷ್ಟ್ರೀಯ ಟೇಬಲ ಟೆನಿಸ್ ಆಟಗಾರ್ತಿ
★ ಶ್ರೀ ನಗರಕರ : ಪ್ರಸಿದ್ಧ ದೇಹದಾಡ್ಯ ಪಟು
★ ಉದಯ ಪ್ರಭು ಅಂಕೋಲಾ : ಅಥ್ಲೇಟಿಕ್‌ದಲ್ಲಿ ಅಂತರಾಷ್ಟ್ರೀಯಮಟ್ಟದ ಓಟಗಾರ

## ವೈದ್ಯಕೀಯ ವಿಜ್ಞಾನ ಸಂಶೋಧನೆ

★ ಮಣಿಪಾಲದ ಹೈಟಕ್ ಆಸ್ಪತ್ರೆಗಳು, ಸಾರಸ್ವತರು ದೇಶಕ್ಕೆ ನೀಡಿದ ಬಹುದೊಡ್ಡ ಕಾಣಿಕೆ ಇಲ್ಲಿಯ ಉಚ್ಚ ಶಿಕ್ಷಣ ಅಂತರಾಷ್ಟ್ರೀಯ ಖ್ಯಾತಿಗಳಿಸಿದೆ.
★ ಡಾ॥ ರಾಮದಾಸ ಪೈ ಮತ್ತು ಬಂಧುಗಳು : ದೇಶ ವಿದೇಶಗಳಲ್ಲಿ ಮಣಿಪಾಲ ಆಸ್ಪತ್ರೆಗಳನ್ನು ಸ್ಥಾಪಿಸಿದರು
★ ವಿಜಯಮಲ್ಯ : ಮಲ್ಯ ಆಸ್ಪತ್ರೆಗಳ ಸಂಸ್ಥಾಪಕರು

| | | |
|---|---|---|
| ★ ಡಾ|| ಎಸ್. ಎಸ್. ಅಜಗಾಂವಕರ | : | ಅಂತರಾಷ್ಟ್ರೀಯ ಖ್ಯಾತಿಯ ವೈದ್ಯರು |
| ★ ಡಾ|| ಎ. ಬಿ. ಬಾಳಿಗಾ | : | ಹೆಸರಾಂತ ಸರ್ಜನ |
| ★ ಡಾ|| ಮುರಳೀಧರ ಕಾಮತ | : | ಕಿಡ್ನಿ ಕಸಿ ಮಾಡಿದ ಪ್ರಥಮ ಭಾರತೀಯ |
| ★ ಡಾ|| ಯು.ಐ.ಎಸ್. ಕೃಷ್ಣನಾಯಕ | : | ಭಾರತೀಯ ದಂತವೈದ್ಯ ಸಂಘದ ಅಧ್ಯಕ್ಷ |
| ★ ಶ್ರೀ ವಿಷ್ಣು ಎಸ್. ಕಾಮತ | : | ಔಷಧಿ ವ್ಯಾಪಾರಸ್ಥರ ರಾಷ್ಟ್ರೀಯ ಕಾರ್ಯದರ್ಶಿ |
| ★ ಡಾ|| ಕೆ. ಎಮ್. ಅಶೋಕ ಪೈ | : | ಪ್ರಖ್ಯಾತ ಮಾನಸಿಕ ತಜ್ಞ |
| ★ ಡಾ|| ಅರುಣ ಬಿ ಶಾಮಷಿ | : | ಭಾರತೀಯ ಕ್ರಿಕೆಟ ತಂಡಕ್ಕೆ ಪ್ರಥಮ ಆರೋಗ್ಯಾಧಿಕಾರಿ |
| ★ ಡಾ|| ಹರಿಹರ ಭಟ್ಟ ಕಲ್ಯಾಣಪುರ | : | ಪ್ರಸಿದ್ಧ ಆರ್ಮಿ (ಸೈನ್ಯದ) ಡಾಕ್ಟರ |
| ★ ಡಾ|| ಕಾರ್ನಾಡ ಬಾಸ್ಕರ ರಾವ್ | : | ಅಂತರಾಷ್ಟ್ರೀಯ ಖ್ಯಾತಿಯ ಗಾಯನಾಕಾಲಿಜಿಸ್ಟ |
| ★ ಸಾಜೀಪ ರಾಮಕೃಷ್ಣಯ್ಯ | : | ಪ್ರಸಿದ್ಧ ಹೋಮಿಯೋಪತಿ ತಜ್ಞ |
| ★ ಡಾ|| ಜಮುನಾ ಪೈ ಮುಂಬೈ | : | ವಿಶ್ವಸುಂದರಿ ಸ್ಪರ್ದಿಗಳಿಗೆ ಆರೈಕೆ ಮಾಡುತ್ತಿರುವ ತಜ್ಞ ವೈದ್ಯರು |
| ★ ಡಾ|| ಕೆ. ಎಮ್. ನಾಡಕರ್ಣಿ | : | ಆಯುರ್ವೇದದ ಪ್ರಸಿದ್ಧ ಸಂಶೋಧಕರು |
| ★ ಡಾ|| ಕುಸುಮಾ ಸೊರಬಾ | : | ಸುಪ್ರಸಿದ್ಧ ನಿಸರ್ಗ ಚಿಕಿತ್ಸಾ ತಜ್ಞೆ |

ಸಾರಸ್ವತರಿಂದ ಸ್ಥಾಪಿಸಲ್ಪಟ್ಟ ಹಲವಾರು ಆಲೋಪತಿ ಮತ್ತು ಆಯುರ್ವೇದ ಔಷಧಿ ತಯಾರಿಕಾ ಘಟಕಗಳು ಪ್ರಖ್ಯಾತಿ ಗಳಿಸಿವೆ.

## ಪ್ರಸಿದ್ಧ ಆಯುರ್ವೇದ ಔಷಧಿ ತಯಾರಿಕಾ ಘಟಕಗಳು

| | | |
|---|---|---|
| ★ ತಾರಾನಾಥ ರಸಔಷಧಿ | : | ಚಿಕ್ಕಮಗಳೂರು |
| ★ ಭುವನೇಂದ್ರ ವೈದ್ಯಶಾಲಾ | : | ಕಟಪಾಡಿ |
| ★ ನಾಯಕ ಆಯುರ್ವೇದಾಶ್ರಮ | : | ಕಟಪಾಡಿ |

## ಉದ್ಯಮಗಳು

ಬೀಡಿ, ಗೇರು, ಹಂಚು, ಹಡಗು ಮತ್ತು ರಸ್ತೆ ಸಾರಿಗೆ, ಡೇರಿ ಮತ್ತು ಹಾಲಿನ ಉದ್ಯಮ ಹೀಗೆ ಹಲವಾರು ಮಿಲಿಯನ್ ರೂಪಾಯಿಗಳ ಜನರಿಗೆ ಕೆಲಸ, ನಾಡಿಗೆ ಸಮೃದ್ಧಿಯನ್ನು ತರುವ ಉದ್ಯಮಗಳನ್ನು ಶತಮಾನಗಳ ಹಿಂದೆಯೆ ಸಾರಸ್ವತರು ಆರಂಭಿಸಿದರು.

ಮಣಿಪಾಲದ ಪೈ ಬಂಧುಗಳು, ಗೋವಾದ ಡೆಂಪೊ, ಸರಗಾಂವಕರ್, ಟಿಮ್‌ಲೋ, ಪಿಕಳೆ ಮುಂತಾದವರು ಸಿ.ಪಿ.ಸಿ.ಯ ವಿ.ಎಸ್. ಕುಡ್ವಾ ಭಾರತ ಬೀಡಿಯ ಬಿ. ಮಂಜುನಾಥ ಪೈ, ಗಣೇಶ ಬೀಡಿಯ ವಿನೋದರಾವ್, ಪ್ರಕಾಶ ಬೀಡಿಯ ಶ್ರೀ ಪ್ರಭುಗಳು, ಕಾಮತ್ ಹೋಟೆಲ್‌ನ ಆರ್. ಪಿ. ಕಾಮತ್ ಮತ್ತು ಎಸ್. ಪಿ. ಕಾಮತ್ ಬಂಧುಗಳು ಜಗತ್‌ಪ್ರಸಿದ್ಧ ಇಂಫೋಸಿಸ್ ಕಂಪ್ಯೂಟರ್ ಸಾಪ್ಟವೇರ್ ಕಂಪನಿಯ ನಿರ್ದೇಶಕ ನಂದನ್ ನಿಲೇಕಣಿ, ಪ್ರಸಿದ್ಧ ಸಾಪ್ಟವೇರ ಕಂಪನಿಯ ಕಾರ್ಳೇ ಕನ್‌ಸಲ್ಟಂಟನ, ಸತೀಶ ಅಂಬೆ, ದೀವಗಿ ಬಂಧುಗಳು, ಯು.ಬಿ. ಗ್ರುಪ್ಸನ ವಿಜಯಮಲ್ಯ, ಪ್ರಸಿದ್ಧ ಕೀಟನಾಶಕ ತಯಾರಕರಾದ ನಲ್ಲೂರ ಶ್ರೀಪಾದರಾವ್, ಸಾರ್ವಜನಿಕ ಸಾರಿಗೆಯಲ್ಲಿ ಪ್ರಸಿದ್ಧಿಗೊಂಡ ಕಾರವಾರ ವಿಠ್ಠಲ ರಾವ್, ಕೃಷ್ಣಾ ಮಿಲ್ಕ, ಸಮೂಹ ಸಂಸ್ಥೆಗಳ ಪೈ ಬಂಧುಗಳು, ಪ್ರಸಿದ್ಧ ಉದ್ದಿಮೆದಾರರು, ಶ್ರೀ ರಾಮಚಂದ್ರ ನಾರಾಯಣ ನಾಯಕ ಹಿರೇಗುತ್ತಿ, ಸುಪ್ರಸಿದ್ಧ ಸಿವಿಲ್ ಕಾಂಟ್ರ್ಯಾಕ್ಟರ, ಮುಂಬಯಿ, ಬೆಂಗಳೂರು, ಕೇರಳ, ಮಂಗಳೂರು ಮಹಾನಗರಗಳಲ್ಲಿ ಸಣ್ಣ-ದೊಡ್ಡ ಉದ್ಯಮಗಳನ್ನು ಸ್ಥಾಪಿಸಿ. ಉದ್ಯೋಗ ಸೃಷ್ಟಿ ಮಾಡಿದ ಸಾರಸ್ವತರು ಸ್ಮರಣಾರ್ಹರು. ದಕ್ಷಿಣ ಕನ್ನಡದ ಸಿ.ಪಿ.ಸಿ. ಹನುಮಾನ, ಕೆನರಾ, ವಿಕ್ರಮ, ನಿರ್ಮಲಾ, ನವಮಿ, ಬೆಳಗಾಂವ ಪೈ ಟ್ರಾನ್ಸಪೋರ್ಟ, ಹುಬ್ಬಳ್ಳಿಯ ಕಾಮತ ಟ್ರಾವೆಲ್ಸ ಮತ್ತು ಮುಂಬೈನ ಅನುಭವ ಇವು ಪ್ರವಾಸ ಮತ್ತು ಸಾರಿಗೆ ಸಂಸ್ಥೆಗಳು.

## ಚಲನಚಿತ್ರ ನಾಟಕ

ಚಿತ್ರ ಪ್ರಪಂಚದ ಮೊದಲ ಮಹಿಳಾ ಕಲಾವಿದೆ ದುರ್ಗಾಕೋಟೆ, ಪ್ರಸಿದ್ಧ ನಟ, ನಿರ್ದೇಶಕ ಗುರುದತ್ತ, ಅಂತರಾಷ್ಟ್ರೀಯ ಖ್ಯಾತಿಯ ಚಿತ್ರ ನಿರ್ದೇಶಕ ಶ್ಯಾಮ ಬೆನಗಲ್, ಸುಪ್ರಸಿದ್ಧ ನಾಟಕಕಾರ, ಚಿತ್ರ ಕಲಾವಿದ, ಚಿತ್ರ ನಿರ್ದೇಶಕ, ಜ್ಞಾನ ಪೀಠ ಪ್ರಶಸ್ತಿ ವಿಜೇತ, ಶ್ರೀ ಗಿರೀಶ ಕಾರ್ನಾಡ, ಪ್ರಸಿದ್ಧ ನಟರಾದ ಅನಂತನಾಗ, ಶಂಕರನಾಗ, ರಮೇಶ ಭಟ್ಟ, ಸುಂದರರಾವ, ಪಂಡರಿಬಾಯಿ, ಲೀನಾ ಚಂದಾವರಕರ, ಮೈನಾವತಿ, ಸುಶೀಲಾರಾಣಿ, ಸಂಗೀತ ನಿರ್ದೇಶಕರಾದ ವಿಷ್ಣುದಾಸ ಶಿರಾಲಿ ಅಲ್ಲದೆ ಇನ್ನೂ ಹಲವಾರು ಭಾರತದ ಚಲನಚಿತ್ರ ರಂಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ನಾಟಕ ರಂಗದಲ್ಲಿ ಹೆಸರಿಸಬಹುದಾದರೆ ಹೊಸಾಡ ಬಾಬುಡಿ ನಾಯಕ, ಮಂಗಳೂರಿನ ವೆಂಕಟೇಶ ಪ್ರಭು, ಬೊಳಂತುರ ಕೃಷ್ಣ ಪ್ರಭು, ಎನ್. ಬಿ. ಕಾಮತ್, ಮುಂಬೈನ ಉಲ್ಲಾಸ ಕಾಮತ ಮತ್ತು ಕೆ. ಜಿ. ಸರಾಫ್ ದಾಮೋದರ ಬಾಳಗಿ, ಉಡುಪಿ ವಾಸುದೇವ ಶೆಣೈ, ಡೊಂಗರಕೇರಿ ರಘುನಾಥರಾವ್, ಪಡುಕೋಣೆ ರಮಾನಂದರಾವ್, ಬೈಂದೂರ ದೇವರಾಯಐಗಳ, ಹೊನ್ನಾವರದ ಎ. ಬಿ. ಶಾನಭಾಗ ಮತ್ತು ಕುಂದಾಪುರದ ಬಾಲಕೃಷ್ಣ ಪೈ ಮುಖ್ಯರು.

## ಪ್ರಸಿದ್ಧ ಕೊಂಕಣಿ ನಾಟಕ ಸಂಘಟನೆಗಳು

ತ್ರಿವೇಣಿ ಕಲಾ ಸಂಗಮ, ಮುಂಬೈ
ಕೆನರಾ ಯುನಿಯನ್ ಜಿಮಖಾನಾ ಮಹಿಳಾ ಘಟಕ, ಬೆಂಗಳೂರು
ರಂಜನಾ ಆರ್ಟ್ಸ್, ಬೆಂಗಳೂರು
ಶ್ರೀ ಲಕ್ಷ್ಮಿ ನಾರಾಯಣ ವೆಂಕಟೇಶ ಕೊಂಕಣಿ ನಾಟ್ಯಸಭಾ, ಕುಂದಾಪೂರ
ಬಾಬುಟಿ ನಾಯಕ ಮಿತ್ರ ಮಂಡಳಿ, ಹೊನ್ನಾವರ
ಮಹಿಳಾ ಮಂಡಲ ಕಟಪಾಡಿ, ಉಡುಪಿ
ಶ್ರೀ ಮಹಾವಿಷ್ಣು ಕಲಾ ಮಂಡಳಿ, ಶಿರಸಿ

## ಸೈನ್ಯ

ರಾಷ್ಟ್ರಪ್ರಶಸ್ತಿ ವಿಜೇತ ಪ್ರಶಾಂತ ಎನ್. ಕಾಮತರಂತಹ ಹಲವಾರು ಸಾರಸ್ವತರು ಭಾರತೀಯ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಆದರೆ ಸಾರಸ್ವತರ ಹೆಮ್ಮೆಯ ಸೈನಿಕರೆಂದರೆ ಸುಭಾಷ ಚಂದ್ರ ಭೊ43ೀಸರ ಬಂಟ, ಕೆ. ಎನ್.ರಾವ, ದಾಂಡೇಲಿ, ನೌಕಾದಳದ ಪರಮೋಚ್ಚ ಅಧಿಕಾರಿ ಎಡ್ಮಿರಲ್ ಎಮ್. ವಿ. ನಾಡಕರ್ಣಿ ಮತ್ತು ಪರಮ ವಿಶಿಷ್ಟ ಸೇವಾ ಮೆಡಲ್ ವಿಜೇತ ಎರ್ ಚೀಫ ಮಾರ್ಷಲ್ ಕತ್ರೇ ಲಕ್ಷ್ಮಣ ಮಾಧವ ಇವರು ಗಮನ ಸೆಳೆಯುತ್ತಾರೆ. ಮನೋಹರ ಹತ್ತಂಗಡಿ ಇವರು ಭಾರತೀಯ ನೌಕಾದಳದ ಕಾರ್ಯದರ್ಶಿ ಮತ್ತು ಮಜಗಾಂ ಡೋಕ್ಸ ಮುಂಬಯಿ ಇದರ ಅಧ್ಯಕ್ಷರಾಗಿದ್ದರು. ಹಲವಾರು ರಾಷ್ಟ್ರಪತಿ ಪದಕಗಳನ್ನು ಗೆದ್ದ ಮುಂಬೈನ ಭಯೋತ್ಪಾದಕರ ದುಸ್ವಪ್ನ ಪೋಲಿಸ ಅಧಿಕಾರಿ ದಯಾನಂದ ಪೈ ಮತ್ತು ವಿನೋದ ಭಟ್ಟ ಅಲ್ಲದೆ ರಾಷ್ಟ್ರಪತಿ ಪ್ರಶಸ್ತಿ ಪಡೆದ ಹೋಮಗಾರ್ಡ ಶಿರಸಿಯ ಗೋವಿಂದರಾಯ್ ಶಾನಭಾಗ ಹೆಮ್ಮೆಯ ಸಾರಸ್ವತರು.

## ಪತ್ರಿಕಾದ್ಯಮ ಮತ್ತು ಸಾಹಿತಿಗಳು

ಸಾರಸ್ವತರ ಮಾತೃಭಾಷೆ ಕೊಂಕಣಿಯಾದರೂ ಕೇರಳದಲ್ಲಿ ಮಲಯಾಳಂ ಭಾಷೆಯ, ಕರ್ನಾಟಕದಲ್ಲಿ ಕನ್ನಡ ಭಾಷೆಯ, ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆಯ ಸಾಹಿತ್ಯವನ್ನು ಅತ್ಯಂತ ಶ್ರೀಮಂತಗೊಳಿಸಿದರು. ರಾಷ್ಟ್ರಕವಿ ಗೋವಿಂದ ಪೈ, ಚುಟುಕು ಬ್ರಹ್ಮ ದಿನಕರ ದೇಸಾಯಿ, ಸಣ್ಣ ಕಥೆಗಳ ಜನಕ ಪಂಜೆ ಮಂಗೇಶರಾಯರು, ಹಲವಾರು ರಾಜ್ಯಮಟ್ಟದ

ಪ್ರಶಸ್ತಿಗಳನ್ನು ಪಡೆದ ಹೆಸರಾಂತ ಸಾಹಿತಿ ಗೌರಿಶ ಕಾಯ್ಕಣಿ, ಭಾರತದ ಪ್ರಸಿದ್ಧ ಪುಸ್ತಕ ಪ್ರಕಟಕರು ಮತ್ತು ಮಾರಾಟಗಾರರಾದ ಜಿ. ಆರ್. ಭಟ್ಕಳ, ಭಾರತದ ಪುಸ್ತಕ ಪ್ರಕಟನೆ ಸಂಘದ ಅಧ್ಯಕ್ಷರೂ, ಯುನೆಸ್ಕೊದ ಸದಸ್ಯರೂ ಆದ ಎಸ್. ಜಿ. ಭಟ್ಕಳ, ಪ್ರಸಿದ್ಧ ಸಾಹಿತಿಗಳಾದ ನಾರಾಯಣರಾವ ಹತ್ತಂಗಡಿ, ಸುಪ್ರಸಿದ್ಧ ಬರಹಗಾರರಾದ ಮತ್ತು ಅಂಕಣಕಾರರಾದ ಎಂ. ವಿ. ಕಾಮತ್, ಸಂಸ್ಕೃತದ ಮತ್ತು ಹಿಂದೂ ಸಂಸ್ಕೃತಿಯ ಸಂಶೋಧನಾ ಬರಹಗಾರರು, ರಾಷ್ಟ್ರಪ್ರಶಸ್ತಿ ವಿಜೇತರೂ ಆದ ಡಾ॥ ದಯಾನಂದ ಶಾನಭಾಗ, ಶೆಣೈ ಗೋಯಬಾಬ, ಯಶ್ವಂತ ಚಿತ್ತಾಲ ಮತ್ತು ದಾಮೋಧರ ಚಿತ್ತಾಲ. ಡಾ॥ ಮನೋಹರ ಸರದೇಸಾಯಿ, ರವೀಂದ್ರ ಕೆಳಕಾರ, ಚಂದ್ರಕಾಂತ ಕಿಣಿ, ಜಯಂತಿ ನಾಯಕ, ದಾಮೋದರ ಬಾಳಿಗಾ, ಡಾ॥ ಕೃಷ್ಣಾನಂದ ಕಾಮತ್, ಜೋತ್ಸ್ನಾ ಕಾಮತ, ಬಹುಜನಹಿತಾಯ, ಬಹುಜನಸುಖಾಯದ, ರವೀಂದ್ರನಾಥ ಶಾನಭೋಗ, ಪತ್ರಿಕೋದ್ಯಮಿ ಸಂತೋಷಕುಮಾರ ಗುಲ್ವಾಡಿ ಮತ್ತು ಪತ್ರಕರ್ತರಾದ ಬಿ. ವಿ. ಬಾಳಿಗಾ, ಬೆ.ಸು.ನಾ. ಮುಲ್ಯ, ಸಾಹಿತಿ ಜಯಂತ ಕಾಯ್ಕಿಣಿ, ಬರಹಗಾರ ಶಾ. ಮಂ. ಕೃಷ್ಣಾರಾವ್ ಮತ್ತು ನಾಗೇಶ ಸೋಂದೆ, ಮಹೇಶ್ವರ ಭಟ್ಟ ಸುತ್ತಂಕಾರ, ಧರ್ಮಾನಂದ, ಕೋಶಂಬಿ, ದೀಲಿಪ ಬೋರ್ಕರ, ತರಂಗದ ಸಂಪಾದಕೀ ಆದ ಸಂಧ್ಯಾ ಪೈ ಮುಂತಾದವರು ಸುಪ್ರಸಿದ್ಧ ಸಾಹಿತಿಗಳಾಗಿದ್ದಾರೆ. ಮಣಿಪಾಲದಿಂದ ಪ್ರಕಟವಾಗುವ ಟಿ. ಸತೀಶ ಪೈಯವರ ಉದಯವಾಣಿ ದಿನಪತ್ರಿಕೆ ಮತ್ತು ಇತರ ಪತ್ರಿಕೆಗಳಾದ ತರಂಗ, ತುಷಾರ, ರೂಪತಾರಾ ಕನ್ನಡದ ಹೆಮ್ಮೆಯ ಪತ್ರಿಕೆಗಳಾಗಿವೆ.

## ಕೃಷಿ

ಕೇರಳ, ಕೊಡಗು, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಉತ್ತರ ಕನ್ನಡ, ರತ್ನಾಗಿರಿ, ಮಹಾರಾಷ್ಟ್ರದ ಕೆಲವು ಭಾಗದಲ್ಲಿ ಸಣ್ಣ, ದೊಡ್ಡ ಅನೇಕ ಕೃಷಿಕರನ್ನು, ಕೃಷಿ ತಜ್ಞರನ್ನು, ರಬ್ಬರ, ತೆಂಗು, ಅಡಿಕೆ, ಕಾಫಿ, ಮಾವು ಪ್ಲಾಂಟರ್‌ಗಳನ್ನು ಕಾಣಬಹುದು. ಕೃಷಿಯಲ್ಲಿ ಗಣನೀಯ ಸಾಧನೆ ಮಾಡಿ ಗಮನ ಸೆಳೆಯುವ ಸಮೀಪದ ಸಾರಸ್ವತರೆಂದರೆ ಶಿರಸಿಯ ಕೋರ್ಲಕಟ್ಟಾ ಭಾಗದ ತೇಲಂಗ ಬಂಧುಗಳು. ಕೃಷಿಯಲ್ಲಿ ಅನೇಕ ಪದವಿಗಳನ್ನು ಹೊಂದಿದ ಈ ಕುಟುಂಬದ ಸದಸ್ಯರು ನೀರು, ಮಣ್ಣು ಮತ್ತು ಮಾನವ ಸಂಪನ್ಮೂಲದ ಸಮರ್ಪಕ ಬಳಕೆಯನ್ನು ತೋರಿಸಿ ಎಲ್ಲ ಕೃಷಿಕರಿಗೆ ಮಾದರಿಯಾಗಿದ್ದಾರೆ. ಡಾ॥ ವಿ. ಎಸ್. ಸೊಂದೆ ಕೃಷಿ ಪಂಡಿತರಾಗಿದ್ದು, ಯಾವುದೇ ವಿಷಯದ ಮೇಲೆ ಅಧಿಕಾರಯುತವಾಗಿ ಮಾಹಿತಿ ನೀಡಬಲ್ಲರು. ಮುಂಡಗೋಡದ ಪಾಲೇಕರ ಬಂಧುಗಳು ಮತ್ತು ಅವರ್ಸಾದ ಪೂರ್ಣಾನಂದ ಭಟ್ಟ ದೊಡ್ಡ ಪ್ರಮಾಣದಲ್ಲಿ ಕೃಷಿಯಲ್ಲಿ ಸಾಧಿಸುತ್ತಿರುವ ಸಾರಸ್ವತ ಬಂಧುಗಳು.

## ಸಾರಸ್ವತರ ಪ್ರಥಮಗಳು

★ ಶೇಕಡಾ ನೂರರಷ್ಟು ಶಿಕ್ಷಿತರಿರುವ ಸಾರಸ್ವತ ಸಮಾಜದಲ್ಲಿ ಮಹಿಳಾ ಶಿಕ್ಷಣ ಪ್ರಯತ್ನದ ಪ್ರಾರಂಭವಾದದ್ದು 1854-57 ರಷ್ಟು ಹಿಂದೆ. ಮಂಗಳೂರಿನಲ್ಲಿ ಬಾಸೆಲ್ ಮಿಶನ್ ಸಂಸ್ಥೆ, ಬ್ರಾಹ್ಮಣ ಹುಡುಗಿಯರ ಶಾಲೆಯನ್ನು ಪ್ರಾರಂಭಿಸಿದಾಗ ಪಾಲಕರು ಉತ್ಸಾಹದಿಂದ ತಮ್ಮ ಪುತ್ರಿಯರನ್ನು ಶಾಲೆಗೆ ಕಳಿಸಲು ಒಪ್ಪಿಕೊಂಡರು.

★ ಮಂಗಳೂರಿನ ಸಾರಸ್ವತರು ಸರಕಾರದ ಮನ ಒಲಿಸಿ 1856ರಲ್ಲಿ 65,000 ರೂ ಚಂದಾ ಸಂಗ್ರಹಿಸಿ ಸಾಂಘಿಕ ಪ್ರಯತ್ನದಿಂದ ಇಂಗ್ಲೀಷ್ ಶಾಲೆ ಸ್ಥಾಪಿಸಿದರು. ಎರಡು ವರ್ಷಗಳ ನಂತರ ಮದ್ರಾಸ್‌ನಲ್ಲಿ ನಡೆದ ಮೆಟ್ರಿಕ್ ಪರೀಕ್ಷೆಯಲ್ಲಿ ಜಿಲ್ಲೆಯಿಂದ ಹೋದ ಏಳು ಜನ ಉತ್ತೀರ್ಣರಾದರಲ್ಲದೇ ವಿಶ್ವವಿದ್ಯಾಲಯಕ್ಕೆ ಓರ್ವ ಪ್ರಥಮ ಸ್ಥಾನದ ಕೀರ್ತಿ ತಂದ.

★ ಯುರೋಪಿಯನ್ ಉದ್ದಿಮೆದಾರರೊಡನೆ ಪಾಲುಗೊಂಡು ನಾರಾಯಣ್ ಆ ಸಿರೂರರು ಹುಬ್ಬಳ್ಳಿಯಲ್ಲಿ 1883ರಲ್ಲಿ ಸದರ್ನ ಮಾರಾಟ ಆ್ಯಂಡ್ ವೀವಿಂಗ್ ಮಿಲ್ಸ್ ಸ್ಥಾಪಿಸಿದರು. ಮುಂದೆ ಬೆಂಗಳೂರಿನಲ್ಲೂ ಈ ಕುಟುಂಬ ನೂಲು ನೇಯ್ಗೆಯ ಮಿಲ್ಲುಗಳನ್ನು ಸ್ಥಾಪಿಸಿತು. ಮೈಸೂರು ಮಹಾರಾಜರ ಸರಕಾರವೇ ಹಲವಾರು ಉದ್ದಿಮೆಗಳನ್ನು ಸ್ಥಾಪಿಸುತ್ತಿದ್ದ ದಿನಗಳಲ್ಲಿ ಖಾಸಗಿ ಸಾಹಸ ಅಪರೂಪದ್ದಾಗಿತ್ತು.

★ ಕನ್ನಡದ ಮೊದಲ ಕಾದಂಬರಿಕಾರರು ಗುಲವಾಡಿ ವೆಂಕಟರಾಯರು, ಅವರ ಇಂದಿರಾಬಾಯಿ ಕೃತಿ ಸಾರಸ್ವತ ಸಮಾಜದ ಬದಲಾಗುತ್ತಿರುವ ಮೌಲ್ಯಗಳ ಕುರಿತಾದ ವಸ್ತು ಹೊಂದಿದ್ದು, 1899ರಲ್ಲಿ ಪ್ರಕಟವಾಯಿತು.

★ ಮೊದಲ ಶಿಶುಗೀತಗಳು ಮತ್ತು ಸಣ್ಣ ಕತೆಗಳನ್ನು ಕನ್ನಡದಲ್ಲಿ ಬರೆದವರು ಪಂಜೆ ಮಂಗೇಶರಾಯರು

★ ಗಾಂಧೀಜಿಯವರಿಗಿಂತಲೂ ಮೊದಲಿಗೆ ಅಸ್ಪೃಶ್ಯತಾ ನಿವಾರಣೆ ಮತ್ತು ಇತರ ಸಾಮಾಜಿಕ ಸುಧಾರಣೆಗಳನ್ನು ಕೈಗೊಂಡವರು ಮಂಗಳೂರಿನ ಕುದ್ಮಲ್ ರಂಗರಾಯರು, ತಮ್ಮ ಮಗಳನ್ನು 1904ರ ಮೊದಲೇ ಡಾ|| ಸುಬ್ಬರಾಯನ್ ಅವರಿಗೆ ಮದುವೆ ಮಾಡಿಕೊಟ್ಟು ಪ್ರಥಮ ಅಂತರ್‌ಜಾತೀಯ ವಿವಾಹಕ್ಕೆ ಅವರು ನಾಂದಿ ಹಾಡಿದ್ದರು. ರಾಜಕೀಯ ಕ್ಷೇತ್ರದಲ್ಲಿ ಡಾ. ಸುಬ್ಬರಾಯನ್ ಅವರ ಮಗ ಮೋಹನಕುಮಾರ ಮಂಗಲಂ ಮತ್ತು ಮೊಮ್ಮಗ ರಂಗರಾಜನ್ ಕುಮಾರ ಮಂಗಲಂ ಮಂತ್ರಿಗಳಾಗಿ ಸುಪರಿಚಿತರು.

★ ಮೊದಲ ವಿಧವಾ ವಿವಾಹ ಕ್ರಿ.ಶ. 1900ರಲ್ಲಿ ಸಾರಸ್ವತ ಸಮಾಜದಲ್ಲಿ ಮುಂಬಯಿಯಲ್ಲಿ ಜರುಗಿತು.

★ ದೇಶದಲ್ಲಿ ಮೊದಲ ಬಾರಿಗೆ ಸಹಕಾರಿ ತಳಹದಿಯ ಮೇಲೆ ಸಾಲ ವಿತರಣಾ ಸಂಸ್ಥೆ, ಶಾಮರಾವ್ ವಿಠ್ಠಲ್ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ 1906ರಲ್ಲಿ ಜನ್ಮತಾಳಿತು. ನಂತರ ಅದು ಸಹಕಾರಿ ಬ್ಯಾಂಕ್ ಆಗಿ ಬೆಳೆಯಿತು.

★ ಏಷಿಯಾ ಖಂಡದಲ್ಲೇ ಪ್ರಪ್ರಥಮ ಸಹಕಾರಿ ತಳಹದಿಯ ಮೇಲೆ ಗೃಹನಿರ್ಮಾಣ ಕೈಗೊಂಡ ಶ್ರೇಯಸ್ಸು ಸಾರಸ್ವತರದು. ಮುಂಬಯಿಯಲ್ಲಿ ಈ ಸೊಸೈಟಿ 1951ರಲ್ಲಿ ಜನ್ಮತಾಳಿತು. ಬೆಂಗಳೂರು ನಗರದಲ್ಲೂ ಬಹುಮಹಡಿ ಫ್ಲಾಟುಗಳ ಇಂಥ ನಿರ್ಮಿತಿಗೆ ಅವರೇ ಮೊದಲಿಗರು.

★ ನಾಡಿನ ಪ್ರಮುಖ ಮೂರು ಬ್ಯಾಂಕ್‌ಗಳಾದ ಕೆನರಾ, ಸಿಂಡಿಕೇಟ್, ಕಾರ್ಪೊರೇಶನ್‌ಗಳಿಗೆ ಕೊಂಕಣಿಗರೇ ಜನ್ಮದಾತರು.

★ ಚಿತ್ರ ಪ್ರಪಂಚದ ಮೊದಲ ಮಹಿಳೆ ದುರ್ಗಾಕೋಟೆ ಇವರು ಹಿಂದಿ ಚಲನಚಿತ್ರದಲ್ಲಿ ಪ್ರಸಿದ್ಧಿಗಳಿಸಿದರು.



## ಸಾರಸ್ವತ ಸೌರಭಕ್ಕೆ ಮಾಹಿತಿ ನೀಡಿದ ಮಹನೀಯರ ಕಿರು ಪರಿಚಯ

### ಪದ್ಮಾಕರ ಮಡಗಾಂವಕರ :



ಸಿದ್ಧಾಪುರ ತಾಲೂಕಿನ ಬಿಳಗಿಯವರಾದ ಶ್ರೀ ಪದ್ಮಾಕರ ಮಡಗಾಂವಕರ ಬಿಳಗಿ ಜಿ.ಎಸ್.ಬಿ ಸಮಾಜದ ಮತ್ತು ದೇವಸ್ಥಾನ ಕಮೀಟಿಯ ಕಾರ್ಯದರ್ಶಿಗಳು. 1975 ರಲ್ಲಿ ಬಿ.ಎಡ್. ನಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಆರನೇ ರ್‍ಯಾಂಕ ಪಡೆದರು. ಇವರು ಬಿಳಗಿ ಸಂಸ್ಥಾನದ ಬಗ್ಗೆ ನಡೆಸಿದ ಅಧ್ಯಯನಗಳನ್ನು ಸಾಹಿತ್ಯ ಪರಿಷತ್ತು ಬೆಂಗಳೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳು ಪ್ರಕಟಿಸಿವೆ. ಸ್ವಾತಂತ್ರ್ಯ ಸಂಗ್ರಾಮ ದಲ್ಲಿ ಸಾರಸ್ವತರ ಸೇವೆಯ ಮಾಹಿತಿಗಳನ್ನು ಇವರು ಸಂಗ್ರಹಿಸಿದ್ದಾರೆ. ಇವರ ಶೈಕ್ಷಣಿಕ, ವೈಜ್ಞಾನಿಕ ಮತ್ತು ಐತಿಹಾಸಿಕ ಲೇಖನಗಳು ಉದಯವಾಣಿ ಮತ್ತು ಕನ್ನಡಪ್ರಭಾ ದಿನಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಜೈವಿಕ ತಂತ್ರಜ್ಞಾನದ ಬಗ್ಗೆ ಅಪಾರ ಆಸಕ್ತಿಯುಳ್ಳ ಮಡಗಾಂವಕರರವರು ಕಳೆದ 32 ವರ್ಷಗಳಿಂದ ಬಿಳಗಿ ಪ್ರೌಢಶಾಲೆಯಲ್ಲಿ ವಿಜ್ಞಾನ ಶಿಕ್ಷಕರಾಗಿ ದುಡಿಯುತ್ತಿರುವರು.

### ಶ್ರೀ ಕೂಡ್ಲ ಆನಂದು ಶ್ಯಾನಭಾಗ :



ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಸಾಹಿತ್ಯದ ಚಟುವಟಿಕೆಗಳಿಗೆ ಚಾಲನೆ ನೀಡಿದ ಇವರು ಜಿಲ್ಲಾ ಕೊಂಕಣಿ ಪರಿಷತ್ತನ್ನು ಸ್ಥಾಪಿಸಿ ಅದರ ಸಂಘಟನಾ ಕಾರ್ಯದರ್ಶಿಗಳಾಗಿದ್ದಾರೆ. ಪ್ರಸಿದ್ಧ ನಾಟಕಕಾರ ಹೊಸಾಡ ಶ್ರೀ ಬಾಬು ಟಿ ನಾಯಕ , ಇವರ ಪ್ರಭಾವದಿಂದ ಕೊಂಕಣಿಯಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಹೊವ್ಯೊ ಕೃತಿಗೆ ಡಾ॥ ಟಿ. ಎಮ್. ಎ. ಪೈ ಪೌಂಡೇಶನ್ ಪ್ರೋತ್ಸಾಹ ಪುರಸ್ಕಾರ ಲಭಿಸಿದೆ. ಎರಡು ವರ್ಷ ಸ್ನಾತಕೋತ್ತರ ಡಿಪ್ಲೋಮಾದಲ್ಲಿ ಇವರು ಏಳನೇ ರ್‍ಯಾಂಕ್ ಗಿಟ್ಟಿಸಿದ್ದಾರೆ. ಕೇಂದ್ರ ಸಾಹಿತ್ಯ ಅಕೆಡಮಿ ಆಯೋಜಿಸಿದ ನಾಲ್ಕು ರಾಜ್ಯಗಳ ಕೊಂಕಣಿ ಭಾಷಾ ತಜ್ಞರ ಚರ್ಚಾಕೂಟಕ್ಕೆ ತಮ್ಮ ಜಿಲ್ಲೆಯಿಂದ ಆಯ್ಕೆಯಾದಲ್ಲಿ ಮೊದಲಿಗರು. ಸಮಾಜದ ಯುವಕರ ಸಂಘಟನೆಗೆ ಜಿಲ್ಲಾದ್ಯಂತ ಸಂಚರಿಸಿ ಜಿ. ಎಸ್. ಬಿ. ಯುವವಾಹಿನಿ ಜಿಲ್ಲಾ ಸಮಾವೇಶಗಳನ್ನು ನಡೆಸುವಲ್ಲಿ ಮುಖ್ಯ ಪ್ರೇರಕ ಶಕ್ತಿಯಾದ ಇವರು ಸಿಂಡಿಕೇಟ ಬ್ಯಾಂಕಿನ ಉದ್ಯೋಗಿ.

### ಶ್ರೀ ರಾಮು ಹರಿ ಕಿಣಿ :



ವೃತ್ತಿಯಿಂದ ಉಪನ್ಯಾಸಕರಾಗಿ, ಉದ್ಯಮಿಗಳಾಗಿ, ಕೃಷಿಕರಾಗಿ, ಪ್ರವೃತ್ತಿಯಿಂದ ಲೇಖಕರಾಗಿ ಸಾಮಾಜಿಕ ಕಾರ್ಯದಲ್ಲಿ ತೊಡಗಿಸಿಕೊಂಡ ಶಿರಸಿ ನಗರದ ಕ್ರಿಯಾಶೀಲ ವ್ಯಕ್ತಿಗಳಾಗಿದ್ದಾರೆ. ಜ್ಞಾನಭಾರತಿ ಸೇವಾ ಸಂಸ್ಥೆಯ ಸ್ಥಾಪಕಾಧ್ಯಕ್ಷರಾಗಿ ಹಲವಾರು ಜನಪರ ಕಾರ್ಯಕ್ರಮಗಳನ್ನು ನಿರ್ದೇಶಿಸಿದ್ದಾರೆ. ಜಿಲ್ಲೆಯ ಪ್ರಸಿದ್ಧ ದೈನಿಕ ಧ್ಯೇಯನಿಷ್ಠ ಪತ್ರಕರ್ತದ ಕೊಂಕಣಿ ಸೌರಭದ ಗೌರವ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಶೈಕ್ಷಣಿಕ ಮತ್ತು ವೈಜ್ಞಾನಿಕ ವಿಷಯದಲ್ಲಿ ಇವರು ಬರೆದ ಪ್ರಬಂಧಗಳು ಅನೇಕ ಪತ್ರಿಕೆಗಳಲ್ಲಿ ಪ್ರಕಟಣೆ ಗೊಂಡಿದ್ದು , ಹಲವಾರು ಭಾಷಣಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿವೆ. ಕೃಷಿಗೆ ಸಂಬಂಧಿಸಿದ ದೇಶದ ಪ್ರತಿಷ್ಠಿತ **ಎ.ಪಿ. ಎಂ. ಎ. ಸಿ.** ಇಂಡಿಯಾದ ಸದಸ್ಯರಾದ ಇವರು ಅತ್ಯುತಮ ಗುಣ ಮಟ್ಟದ ತೋಟಗಾರಿಕಾ ನರ್ಸರಿ ಲಹರಿ ಪ್ರಾರ್ಮ್ಸ ದ ಮಾಲಕರಾಗಿದ್ದಾರೆ.

**ಡಾ|| ಕೃಷ್ಣಾನಂದ ಲಕ್ಷ್ಮಣ ಕಾಮತ , ಬೆಂಗಳೂರು :**



ಹೊನ್ನಾವರ ಮೂಲದ ಡಾ|| ಕೃಷ್ಣಾನಂದ ಕಾಮತ್ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಮ್. ಎಸ್‌ಸಿ. ಪದವಿಯನ್ನು ಗಳಿಸಿದ ನಂತರ ಅಮೇರಿಕೆಯ ನ್ಯೂಯಾರ್ಕ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿಯನ್ನು ಗಳಿಸಿದರು. ಭಾರತದ ಹಲವಾರು ಭಾಷೆಗಳಲ್ಲಿ ಪ್ರಭುತ್ವವನ್ನು ಹೊಂದಿದ ಇವರು ನೂರಾರು ಗ್ರಂಥಗಳನ್ನು ಮತ್ತು ಲೇಖನಗಳನ್ನು ಸಾಹಿತ್ಯ ಲೋಕದಲ್ಲಿ ಬಿಡುಗಡೆ ಮಾಡಿದ್ದಾರೆ. , 1969,1975 ಮತ್ತು 1991 ನೇ ಸಾಲಿನಲ್ಲಿ ಇವರ ಪ್ರವಾಸ ಕಥನಗಳು, ವೈಜ್ಞಾನಿಕ ಕೃತಿಗಳು ಉತ್ತಮ ಕೃತಿಗಳೆಂದು ಬಹುಮಾನ ಗಳಿಸಿದವು. ನಾನು ಅಮೇರಿಕಾಗೆ ಹೋಗಿದ್ದೆ.. ಮತ್ತು ಪ್ರಾಣಿಪರಿಸರ ಗ್ರಂಥಗಳನ್ನು ವಿಶ್ವವಿದ್ಯಾಲಯಗಳು ಪಠ್ಯ ಪುಸ್ತಕಗಳಿಗಾಗಿ ಬಳಸಿವೆ. ಮಧ್ಯ ಪ್ರದೇಶದ ಸರಕಾರದ ವಿನಂತಿಯ ಮೆರೆಗೆ ಅಲ್ಲಿಯ ಆದಿವಾಸಿಗಳ ಜೀವನದ ಬಗ್ಗೆ ಅಭ್ಯಸಿಸಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ.ರಾಜ್ಯ ಸಾಹಿತಿಯ ಅಕಾಡಮಿಯ ಗೌರವ ವೇತನ ಪಡೆದ ಡಾ|| ಕೃಷ್ಣಾನಂದ ಕಾಮತ್ ಇವರ ಪ್ರಾಣಿ -ಪರಿಸರ ಪುಸ್ತಕವನ್ನು ಪ್ರಪ್ರಥಮ ವಿಶ್ವ ಕನ್ನಡ ಸಮ್ಮೇಳನದಲ್ಲಿ ಕರ್ನಾಟಕ ಸರ್ಕಾರವು ಮುದ್ರಿಸಿ ವಿತರಣೆ ಮಾಡಿತು. 1997 ರ ಉತ್ತರ ಕನ್ನಡ ಜಿಲ್ಲೆಯ 9 ನೇ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಗೌರವ ಪಡೆದರು. ಇವರು ತಮ್ಮ ಧರ್ಮ ಪತ್ನಿ ಡಾ|| ಜ್ಯೋತ್ಸ್ನಾ ಕಾಮತ್‌ರ ಸಹಯೋಗದಿಂದ ಪ್ರಾರಂಭಿಸಿದ **ಕಾಮತ್ ವೆಬ್ ಸೈಟ್** ಸಾಹಿತ್ಯ ಲೋಕದ ವಿಶ್ವದಲ್ಲಿ ಪ್ರಸಿದ್ಧಿ ಗಳಿಸಿದೆ. ಭಾರತದ ಕುರಿತು ಕಾರ್ಯಕ್ರಮಗಳನ್ನು ಬಿತ್ತರಿಸುವ 25 ಅತ್ಯುತ್ತಮ ವೆಬ್ ಸೈಟ್ ಗಳಲ್ಲಿ **ಕಾಮತ್ ವೆಬ್‌ಸೈಟ್** ಕೂಡ ಒಂದಾಗಿದೆ.

**ಡಾ|| ರೋಹಿಣಿ ಎನ್ ಪ್ರಭು :**



1939 ರಲ್ಲಿ ಜನಿಸಿದ ಡಾ|| ರೋಹಿಣಿ ಪ್ರಭುರವರು ಹುಬ್ಬಳ್ಳಿಯ ಕರ್ನಾಟಕ ನರ್ಸಿಂಗ್ ಹೋಮ್ ಇದರ ಪ್ರಸಿದ್ಧ ವೈದ್ಯೆ. ಹುಬ್ಬಳ್ಳಿಯ ಜನಪ್ರಿಯ ಸರ್ಜನ ಡಾ|| ನಾಗೇಶ ಎಮ್. ಪ್ರಭು ಇವರ ಧರ್ಮ ಪತ್ನಿಯಾದ ಇವರು 1965 ರಲ್ಲಿ ಮದ್ರಾಸ್ ವಿಶ್ವವಿದ್ಯಾಲಯಕ್ಕೆ ಮೂರನೇ ರ‍್ಯಾಂಕ್ ಗಳಿಸಿ 1988 ರಲ್ಲಿ ಎಫ್.ಐ. ಎ. ಎಮ್. ಎಸ್. ಪದವಿಯನ್ನು ಪಡೆದರು. ಹುಬ್ಬಳ್ಳಿ ನಗರದ ಹಲವಾರು ವೈದ್ಯಕೀಯ ಮತ್ತು ಸಾಮಾಜಿಕ ಸೇವಾ ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ ಹೆಸರು ವಾಸಿಯಾಗಿದ್ದಾರೆ. ವೈದ್ಯಕೀಯ ರಂಗದಲ್ಲಿ ಸಾರಸ್ವತ ಸಮಾಜದ ಮತ್ತು ಅನ್ಯ ಸಮಾಜದ ಬಡರೋಗಿಗಳಿಗಾಗಿ ಹಲವಾರು ಸೇವಾ ಟ್ರಸ್ಟುಗಳನ್ನು ನಡೆಸುತ್ತಿದ್ದಾರೆ. ಆಕಾಶವಾಣಿ ಧಾರವಾಡ ಕೇಂದ್ರವು ಇವರು ನಡೆಸಿಕೊಟ್ಟ ಹಲವಾರು ವೈದ್ಯಕೀಯ ಮಾಹಿತಿಗಳ ಕಾರ್ಯಕ್ರಮವನ್ನು ಬಿತ್ತರಿಸಿವೆ. ಹಲವಾರು ಮಹಿಳಾ ವೇದಿಕೆ ಮತ್ತು ಜನಪರ ಸೇವೆಯನ್ನು ಗಮನಿಸಿದ ಹುಬ್ಬಳ್ಳಿ ಮಹಾನಗರ ಸಭೆ 1999 ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿತು. 1998 ರಲ್ಲಿ ಸಿರಸಿಯಲ್ಲಿ ನಡೆದ ಪ್ರಥಮ ಅಖಿಲ ಭಾರತ ಮಹಿಳಾ ಕೊಂಕಣಿ ಸಮಾವೇಶ ಮತ್ತು 1999 ರಲ್ಲಿ ನಡೆದ ಮಂಗಳೂರಿನ ಪ್ರಥಮ ವಿಶ್ವ ಸಾರಸ್ವತ ಸಮ್ಮೇಳನಕ್ಕೆ ಪ್ರಮುಖ ಭಾಷಣಕಾರರಾಗಿ ಆಯ್ಕೆಯಾಗಿದ್ದರು.

**ಹರಿ ನಾಗೇಶ ಪೈ ಹಳದೀಪುರ :**



1957 ರಲ್ಲಿ ಜನಿಸಿದ ಶ್ರೀ ಹರಿ ನಾಗೇಶ ಪೈ ಜಿ. ಎಸ್. ಬಿ. ಸಮಾಜದ ಅತ್ಯಂತ ಜನಪ್ರಿಯ ಸಮಾಜಸೇವಕರು. ಬಿ. ಎಸ್‌ಸಿ. ಬಿ. ಎಡ್. ಮಾಡಿದ ಇವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಆರನೇ ರ್‍ಯಾಂಕ ಗಳಿಸಿ ನಂತರ ಎಮ್. ಎಡ್. ನಲ್ಲಿ ಪ್ರಥಮ ರ್‍ಯಾಂಕ ಪಡೆದರು. 1978ರಿಂದ ಪ್ರೌಢಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರು ದಕ್ಷಿಣ ಭಾರತ ವಿಜ್ಞಾನ ಕಾರ್ಯಾಗಾರದಲ್ಲಿ ಉತ್ತಮ. ಶಿಕ್ಷಕ ಪ್ರಶಸ್ತಿಯನ್ನು, 1975ರಲ್ಲಿ ಉತ್ತರ ಕನ್ನಡ ಜಿಲ್ಲಾಮಟ್ಟದ ಆದರ್ಶ ಶಿಕ್ಷಕ ಪ್ರಶಸ್ತಿಯನ್ನು ಗಳಿಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಗಣಿತದ ಸಂಪನ್ಮೂಲ ವ್ಯಕ್ತಿಯಾಗಿ, ಪರ್ತಗಾಳಿ ಮಠದಲ್ಲಿ ಕೇಂದ್ರ ಸಮಿತಿಯ ಸದಸ್ಯರಾಗಿ ವಿದ್ಯಾಧಿರಾಜ ಚಾರಿಟೇಬಲ್ ಟ್ರಸ್ಟನ ಬೇಂಗ್ರೆ ಪ್ರೌಢಶಾಲೆಯ ಕಾರ್ಯದರ್ಶಿಯಾಗಿ ಹಳದೀಪುರದ ಗ್ರಾಮದೇವಾಲಯಗಳಲ್ಲಿ ಕಾರ್ಯದರ್ಶಿಗಳಾಗಿ ಹೊನ್ನಾವರ ತಾಲೂಕಾ ಶಿಕ್ಷಕರ ಸಂಘದ ಅಧ್ಯಕ್ಷರಾಗಿ ಸಾಕ್ಷರತೆಯಲ್ಲಿ ಮತ್ತು ಭಾರತದ ಜನಗಣತಿ-2001ರಲ್ಲಿ ಸಂಪನ್ಮೂಲ ವ್ಯಕ್ತಿ ಹಾಗೂ ಮುಖ್ಯ ತರಬೇತುದಾರರಾಗಿ ಸಲ್ಲಿಸಿದ ಸೇವೆಗಳು ಅತ್ಯಂತ ಜನಮೆಚ್ಚುಗೆ ಪಡೆದಿವೆ.

**ಅಜೀತ ಪ್ರಭು (ಅಂಕೋಲಾ) :**



28 ವರ್ಷ ವಯಸ್ಸಿನ ಶ್ರೀ ಅಜೀತ ಪ್ರಭು ಜಿ. ಎಸ್. ಬಿ. ಸಮಾಜದ ಉದಯೋನ್ಮುಖ ಪ್ರತಿಭೆ. ವೃತ್ತಿಯಿಂದ ವ್ಯಾಪಾರಸ್ಥರಾದ ಇವರು ಪ್ರವೃತ್ತಿಯಿಂದ ಬರಹಗಾರರಾಗಿದ್ದಾರೆ. 1999-2000 ರ ಸಾಲಿನಲ್ಲಿ ಇವರ ನೂರಕ್ಕೂ ಹೆಚ್ಚು ಕಥೆ, ಕವನ, ನಿಳ್ಗತೆ, ಲೇಖನ ಹಾಗೂ ಫೋಟೋ ಲೇಖನಗಳು ಕರ್ನಾಟಕದ ಜನಪ್ರಿಯ ನಿಯತಕಾಲಿಕೆಗಳಾದ ತರಂಗ, ಹೊಸದಿಗಂತ, ಉತ್ಥಾನ, ಕಸ್ತೂರಿ, ವಿಜಯಚಿತ್ರ, ಮಂಜುವಾಣಿ, ವಿಕ್ರಮ, ರಾಗಸಂಗಮ, ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿದೆ.

**ಜ್ಯೋತ್ಸ್ನಾ, ಕೃಷ್ಣಾನಂದ ಕಾಮತ, ಬೆಂಗಳೂರು :**



ಮಹಾರಾಷ್ಟ್ರದ ಸತಾರಾ ಜಿಲ್ಲೆಯಲ್ಲಿ ಜನಿಸಿದ ಇವರು ಎಂ. ಎ., ಪಿ. ಎಚ್. ಡಿ. ಪದವಿಗಳನ್ನು ಗಳಿಸಿ ಬೆಂಗಳೂರು ಆಕಾಶವಾಣಿಯ ಕೇಂದ್ರ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ಕೊಂಕಣಿ, ಕನ್ನಡ, ಇಂಗ್ಲಿಷ, ಭಾಷೆಗಳ ಜೊತೆಗೆ ಹಿಂದಿ, ಸಂಸ್ಕೃತ, ಮರಾಠಿ, ಬಂಗಾಳಿ, ಭಾಷೆಗಳಲ್ಲಿ ಪ್ರಭುತ್ವ ಹೊಂದಿರುವ ಜ್ಯೋತ್ಸ್ನಾ ಕಾಮತರವರು ಕನ್ನಡ ಸಾಹಿತ್ಯ ಲೋಕದ ಪ್ರತಿಭಾನ್ವಿತ ಬರಹಗಾರರು. ಕೊಂಕಣಿ, ಕನ್ನಡ, ಇಂಗ್ಲಿಷ ಭಾಷೆಗಳಲ್ಲಿ 100 ಕ್ಕೂ ಹೆಚ್ಚು ಪ್ರಬಂಧ ಮತ್ತು ಬರಹಗಳನ್ನು ರಚಿಸಿದ್ದಾರೆ. ಇವರು ಸಂಶೋಧಿಸಿ ಬರೆದ ಕರ್ನಾಟಕ ಶಿಕ್ಷಣ ಪರಂಪರೆ ಗ್ರಂಥಕ್ಕೆ 1998 ನೇ ವರ್ಷದ ಉತ್ತಮ ಸಂಶೋಧನಾ ಗ್ರಂಥವೆಂದು ಕರ್ನಾಟಕ ಸಾಹಿತ್ಯ ಅಕಾಡಮಿಯು ಪ್ರಥಮ ಬಹುಮಾನ ನೀಡಿತು. 1995-96 ನೇ ವರ್ಷದ ಉತ್ತಮ ಬರಹಗಾರ್ತಿ ಎಂದು ಉತ್ತರಕನ್ನಡ ಜಿಲ್ಲಾ ಪತ್ರಿಕಾಮಂಡಳಿಯು ಶ್ರೀ ಕೆ. ಶಾಮರಾವ್ ದತ್ತಿ ನಿಧಿಯ ಪುರಸ್ಕಾರ ನೀಡಿದೆ. ಇವರಿಗೆ 1998 ರಲ್ಲಿ ಮುಂಬೈ ಕರ್ನಾಟಕ ಸಂಘದ ಸು. ಕೃಷ್ಣ ರಾವ್ ಸ್ಮಾರಕ ಬಹುಮಾನ ಲಭಿಸಿದೆ. ಇವರು ಕನ್ನಡಕ್ಕೆ ಸಲ್ಲಿಸಿದ ಅಪಾರ ಸೇವೆಯನ್ನು ಗುರುತಿಸಿ ಕರ್ನಾಟಕ ಸರಕಾರ 1991ನೇ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ನೀಡಿ ಸನ್ಮಾನಿಸಿತು. ಇವರು ಕನ್ನಡದ ಪ್ರಸಿದ್ಧ ಸಾಹಿತಿ ಶ್ರೀ ಕೃಷ್ಣಾನಂದ ಕಾಮತ್‌ರ ಧರ್ಮಪತ್ನಿಗಳಾಗಿದ್ದಾರೆ.

PRINTED AT : metal-o-prints HUBLI ☎ :(0836)333505